# ಸತ್ಯ-ಮಿಥ್ಯ


ಲೇಖಕರು

**ನಈಮ್ ಸಿದ್ದೀಕಿ**

ಅನುವಾದಕರು

**ಪಿ. ನೂರ್ ಮುಹಮ್ಮದ್**

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

# ಪುಸ್ತಕದ ಕುರಿತು

ಸತ್ಯ-ಮಿಥ್ಯ ಎಂಬ ಈ ಕೃತಿಯು ಖ್ಯಾತ ಉರ್ದು ಸಾಹಿತಿ ಮತ್ತು ವಿದ್ವಾಂಸ ನಈಮ್ ಸಿದ್ದೀಕಿಯವರು ಬರೆದ 'ಹಕ್ ವ ಬಾತಿಲ್' ಪುಸ್ತಕದ ಕನ್ನಡ ಭಾಷಾಂತರವಾಗಿದೆ.

ಸತ್ಯ-ಮಿಥ್ಯಗಳ ತಾಕಲಾಟ ನಿರಂತರ ನಡೆಯುತ್ತಿರುವ ಪ್ರಕ್ರಿಯೆ. ಬಾಹ್ಯ ನೋಟಕ್ಕೆ ಮಿಥ್ಯವು ಸದಾ ಪ್ರಭಾವಶಾಲಿಯಾಗಿರುವಂತೆ ಭಾಸವಾಗುತ್ತದೆ. ಈ ಸತ್ಯ, ನ್ಯಾಯ, ತಾಳ್ಮೆಗಳ ಮಾತು ಇಂದು ನಡೆಯಲಾರದು. ಇಂದು ಬೇಕಾಗಿರುವುದು ಅಕ್ರಮ, ಅನ್ಯಾಯ, ಮೋಸ, ವಂಚನೆ, ಹಾಗಿದ್ದರೆ ಮಾತ್ರ ಆಧುನಿಕ ಜಗತ್ತಿನಲ್ಲಿ ಯಶಸ್ವಿಯಾಗಬಹುದೆಂಬ ತಪ್ಪು ಕಲ್ಪನೆಯೂ ಬಲವಾಗುತ್ತಿದೆ. ಈ ಹಿನ್ನೆಲೆಯಲ್ಲಿ ಸತ್ಯ-ಮಿಥ್ಯಗಳ ಸಂಘರ್ಷದ ಕುರಿತು ಆಧುನಿಕ ಬುದ್ಧಿಗಳಲ್ಲಿ ಹುಟ್ಟುವ ಪ್ರಮುಖ ಪ್ರಶ್ನೆಗಳನ್ನು ಸಾಧಾರ ಮತ್ತು ತರ್ಕಬದ್ಧವಾಗಿ ವಿಶ್ಲೇಷಿಸಿ, ಸತ್ಯ-ಮಿಥ್ಯ ಚಳವಳಿಗಳ ನೈಜ ಸ್ವರೂಪವನ್ನು ಈ ಕೃತಿಯಲ್ಲಿ ಪ್ರತಿಬಿಂಬಿಸಲಾಗಿದೆ.

ಈ ಕೃತಿಯು ಪ್ರಥಮತಃ 'ಜ್ಯೋತಿ ಪ್ರಕಾಶನ, ಉಪ್ಪಿನಂಗಡಿ' ಇವರಿಂದ ಪ್ರಕಟವಾಗಿದ್ದು ಅದರ ಪರಿಷ್ಕೃತ ದ್ವಿತೀಯಾವೃತ್ತಿಯನ್ನು ಇದೀಗ ನಮ್ಮ ಸಂಸ್ಥೆ ವತಿಯಿಂದ ಪ್ರಕಟಿಸಿ ವಾಚಕರ ಮುಂದಿಡುತ್ತಿದ್ದೇವೆ.

- *ಪ್ರಕಾಶಕರು*

## ಶೀರ್ಷಿಕೆಗಳು

# ಸತ್ಯ-ಮಿಥ್ಯಗಳ ಸಂಘರ್ಷ

ಸತ್ಯ-ಮಿಥ್ಯಗಳ ಸಂಘರ್ಷದ ಕುರಿತು ಪವಿತ್ರ ಕುರ್‌ಆನಿನ ವಿವಿಧೆಡೆಗಳಲ್ಲಿ ಈ ರೀತಿ ಪ್ರಸ್ತಾವಿಸಲಾಗಿದೆ.

ನಾವು ಆಕಾಶವನ್ನೂ ಭೂಮಿಯನ್ನೂ ಅವುಗಳಲ್ಲಿ ಇರುವುದೆಲ್ಲವನ್ನೂ ಬರಿಯ ಲೀಲೆಗಾಗಿ ಸೃಷ್ಟಿಸಲಿಲ್ಲ. ನಾವು ಒಂದು ಆಟದ ವಸ್ತುವನ್ನು ತಯಾರಿಸಲಿಚ್ಛಿಸಿದ್ದರೆ ಮತ್ತು ಅಷ್ಟು ಮಾತ್ರ ನಮಗೆ ಮಾಡಲಿಕ್ಕಿರುತ್ತಿದ್ದರೆ ನಾವದನ್ನು ನಮ್ಮ ಬಳಿಯೇ ಮಾಡಿಕೊಳ್ಳುತ್ತಿದ್ದೆವು. ಆದರೆ ನಾವಂತು ಮಿಥ್ಯದ ಮೇಲೆ ಸತ್ಯದ ಹೊಡೆತ ಬೀಳಿಸುತ್ತೇವೆ. ಇದು ಮಿಥ್ಯದ ತಲೆಯನ್ನು ಒಡೆದು ಹಾಕುತ್ತದೆ ಮತ್ತು ಅದು ನೋಡುತ್ತಿದ್ದಂತೆಯೇ ಅಳಿದು ಹೋಗುತ್ತದೆ. ನೀವು ಸೃಷ್ಟಿಸುವ ಮಾತುಗಳಿಂದಾಗಿಯೇ (ನಿಮಗೆ) ವಿನಾಶ ಕಾದಿದೆ.

(ಅಲ್ ಅಂಬಿಯಾ : 16-18)

"ಸತ್ಯ ಬಂದು ಬಿಟ್ಟಿತು. ಮಿಥ್ಯ ಅಳಿದು ಹೋಯಿತು. ಮಿಥ್ಯವು ಅಳಿದು ಹೋಗುವಂತಹದ್ದೇ" ಎಂದು ಘೋಷಿಸಿರಿ. (ಬನೀ ಇಸ್ರಾಈಲ್ : 81)

ಅಲ್ಲಾಹನು 'ಕಲಿಮ ತಯ್ಯಿಬ' (ಪವಿತ್ರ ವಚನ)ವನ್ನು ಯಾವುದಕ್ಕೆ ಹೋಲಿಸಿರುತ್ತಾನೆಂದು ನೀವು ನೋಡುತ್ತಿಲ್ಲವೇ? ಅದರ ಉಪಮೆ ಹೀಗಿದೆ:- ಒಂದು ಉತ್ತಮ ಜಾತಿಯ ಮರ. ಅದರ ಬೇರುಗಳು ನೆಲದೊಳಗೆ ಆಳಕ್ಕೆ ಸ್ಥಿರವಾಗಿ ನಾಟಿವೆ. ಗೆಲ್ಲುಗಳು ಆಕಾಶಕ್ಕೆ ಮುಟ್ಟಿವೆ. ಅದು ಸದಾಕಾಲವೂ ತನ್ನ ಪ್ರಭುವಿನ ಅನುಜ್ಞೆಯಿಂದ ತನ್ನ ಫಲಗಳನ್ನು ಕೊಡುತ್ತಿದೆ. ಜನರು ಇವುಗಳಿಂದ ಪಾಠ ಕಲಿಯಲೆಂದು ಅಲ್ಲಾಹ್ ಈ ಉದಾಹರಣೆಗಳನ್ನು ಕೊಡುತ್ತಾನೆ. 'ಕಲ್ಮ ಖಬೀಸಃ' (ಪೈಶಾಚಿಕ ವಚನ)ದ ಉಪಮೆ - ಒಂದು ಕೆಟ್ಟ ಜಾತಿಯ ಮರದಂತಿದೆ. ಅದು ಭೂಮಿಯ ಮೇಲ್ಭಾಗದಿಂದ ಕಿತ್ತೆಸೆಯಲ್ಪಡುತ್ತದೆ. ಆದಕ್ಕೆ ಸ್ಥಿರತೆಯೆಂಬುದೇ ಇಲ್ಲ. (ಇಬ್‌ರಾಹೀಮ್ : 24-26)

ಅಲ್ಲಾಹ್ ಆಕಾಶದಿಂದ ಮಳೆ ಸುರಿಸಿದನು. ಪ್ರತಿಯೊಂದು ನದಿ-ನಾಲೆ ಅದನ್ನು ತನ್ನಲ್ಲಿ ತುಂಬುವಷ್ಟನ್ನು ಕೊಂಡೊಯ್ದಿತು. ತರುವಾಯ ಮಹಾಪೂರವೆದ್ದಾಗ ಮೇಲ್ತಳದಲ್ಲಿ ನೊರೆಯೂ ಬಂದಿತು. ಇದೇ ತರದ ನೊರೆಯು ಆಭರಣ ಹಾಗೂ ಪಾತ್ರೆಗಳನ್ನು ಮಾಡಲಿಕ್ಕಾಗಿ ಲೋಹಗಳನ್ನು ಬೆಂಕಿಯಲ್ಲಿ ಕರಗಿಸುವಾಗ ಅವುಗಳಿಂದಲೂ ಏಳುತ್ತದೆ. ಈ ಉಪಮೆಯ ಮೂಲಕವೇ ಅಲ್ಲಾಹ್ ಸತ್ಯ ಮತ್ತು ಅಸತ್ಯಗಳನ್ನು ವಿಶದೀಕರಿಸುತ್ತಾನೆ. ನೊರೆ ಆರಿ ಹೋಗುತ್ತದೆ ಮತ್ತು ಮಾನವನಿಗೆ ಉಪಯುಕ್ತವಾದುದು ಭೂಮಿಯಲ್ಲಿ ತಂಗಿಕೊಳ್ಳುತ್ತದೆ. ಹೀಗೆ ಅಲ್ಲಾಹ್ ಉಪಮೆಗಳ ಮೂಲಕ ವಿಷಯವನ್ನು ವಿವರಿಸಿ ಹೇಳುತ್ತಾನೆ. (ಅರ್ರಅ್‌ದ್ : 17 )

ಈ ಕುರ್‌ಆನ್ ವಾಕ್ಯಗಳ ತಾತ್ಪರ್ಯ ಸುಸ್ಪಷ್ಟವಾಗಿದೆ:

ಸತ್ಯ ಮತ್ತು ಮಿಥ್ಯಗಳೆಂಬ ಎರಡು ಶಕ್ತಿಗಳು ಇತ್ತಂಡಗಳಾಗಿ ಪರಸ್ಪರ ಸಂಘರ್ಷಿಸುವ ರೀತಿಯಲ್ಲಿ ಜಾಗತಿಕ ವ್ಯವಸ್ಥೆಯು ಯೋಜಿಸಲ್ಪಟ್ಟಿದೆ. ಈ ವಾಸ್ತವಿಕಾಂಶವು ಪ್ರಸ್ತುತ ಸೂಕ್ತಗಳಲ್ಲಿ ಅಡಕವಾಗಿದೆ. ಸತ್ಯ, ಸನ್ಮಾರ್ಗ ಮತ್ತು ಒಳಿತಿಗೆ ಸದಾ ವಿಜಯ, ಪ್ರಗತಿ, ಪ್ರಾಬಲ್ಯ ಮತ್ತು ಸ್ಥಿರತೆ ಲಭ್ಯವಾಗುವುದು. ತದ್ವಿರುದ್ಧವಾಗಿ ಮಿಥ್ಯಕ್ಕೆ ಸದಾ ಸೋಲು, ನಾಶ ಮತ್ತು ಅಭದ್ರತೆಗಳು ಕಟ್ಟಿಟ್ಟ ಬುತ್ತಿ. ಸಂಕ್ಷಿಪ್ತದಲ್ಲಿ ಸತ್ಯದ ಮೌಲ್ಯವು ಶಾಶ್ವತ, ಮಿಥ್ಯದ ಸ್ಥಾನವು ಅಭದ್ರ.

ಸತ್ಯ-ಮಿಥ್ಯಗಳ ಸಂಘರ್ಷವು ತೀವ್ರವಾಗಿದ್ದ ಕಾಲದಲ್ಲಿಯೇ ಪ್ರಸ್ತುತ ಕುರ್‌ಆನ್ ಸೂಕ್ತಗಳು ಅವತೀರ್ಣಗೊಂಡಿವೆ. ಆ ಹಿನ್ನೆಲೆಯಲ್ಲಿ ಪವಿತ್ರ ಕುರ್‌ಆನ್ ಸತ್ಯದ ವಾಹಕರನ್ನು ಈ ರೀತಿ ಸಾಂತ್ವನಗೊಳಿಸುತ್ತದೆ.

"ಪ್ರಪಂಚದ ಸಮಗ್ರ ವ್ಯವಸ್ಥೆಯು ಸತ್ಯಕ್ಕೆ ಅನುಕೂಲವಾಗಿದೆ. ಮಿಥ್ಯಕ್ಕೆ ತಾತ್ಕಾಲಿಕ ಅಭಿವೃದ್ಧಿ ಗೋಚರವಾಗುತ್ತಿದ್ದರೂ ಜಗತ್ತಿನ ನೈಸರ್ಗಿಕ ಸ್ವಭಾವವು ಅದಕ್ಕೆ ವಿರುದ್ಧವಾಗಿದೆ. ಆದ್ದರಿಂದ ಮಿಥ್ಯವಾದಿಗಳ ಕೃತಕ ಯಶಸ್ಸಿನಿಂದ ವಂಚಿತರಾಗದೆ ಪರಿಶ್ರಮವನ್ನು ಮುಂದುವರಿಸುತ್ತಲಿರಿ, ಅಂತಿಮ ವಿಜಯವು ನಿಮ್ಮ ಕೈಗಳಲ್ಲಿರುವುದು" ಈ ವಾಕ್ಯಗಳು ಪೂರ್ವಕಾಲ ಮುಸ್ಲಿಮರಿಗೆ ಸರಿಯಾದ ಧೈರ್ಯ, ಸ್ಥೈರ್ಯ ಮತ್ತು ವಿಶ್ವಾಸದಾರ್ಢ್ಯವನ್ನು ನೀಡಿತು. ಅಲ್ಲದೆ ಅರೇಬಿಯಾದ ಹಾಗೂ ಪರಿಸರದ ಜನರ ಜೀವನವು ಮಿಥ್ಯದ ಮೇಲೆ ನಿಂತಿದೆ; ಬೆರಳೆಣಿಕೆಯಷ್ಟು

ಜನರು ಮಾತ್ರ ಸತ್ಯದ ಧ್ವಜವಾಹಕರಾಗಿ ಹೊರಡಬೇಕೆಂಬ ವಿಚಾರವು ಸತ್ಯವಿಶ್ವಾಸಿಗಳನ್ನು ಸ್ವಲ್ಪವೂ ಹಿಂದೆ ಸರಿಸಲಿಲ್ಲ. ಶತಮಾನಗಳ ಹಿಂದೆ ಜಾಗತಿಕ ಮಟ್ಟದಿಂದ ಉಚ್ಚಾಟಿಸಲ್ಪಟ್ಟ ಆ ಸತ್ಯ ವ್ಯವಸ್ಥೆಯು ಈಗ ಹೇಗೆ ತಾನೇ ವಿಜಯ ಸಾಧಿಸೀತೆಂಬ ಸಂದೇಹವೂ ಅವರ ಹೃದಯಗಳನ್ನು ಕೆಣಕಲಿಲ್ಲ. ತನ್ಮೂಲಕ ಸತ್ಯ-ಮಿಥ್ಯಗಳ ಸಂಘರ್ಷದ ಕುರಿತು ಪವಿತ್ರ ಕುರ್‌ಆನ್ ಪ್ರತಿಪಾದಿಸಿದ ತತ್ವಗಳೆಲ್ಲವೂ ಸುಸ್ಥಿರ ಮತ್ತು ಶಾಶ್ವತವೆಂದು ಅವರ ತ್ಯಾಗ ಪರಿಶ್ರಮಗಳೇ ಸಾಬೀತುಪಡಿಸಿದುವು.

ಆ ತತ್ವವು ಇಂದಿಗೂ ಸುಸ್ಥಿರವಾಗಿದೆ. ಅದರಿಂದ ಪೂರ್ವಕಾಲ ಮುಸ್ಲಿಮರು ಗಳಿಸಿದ ಸ್ಫೂರ್ತಿ ಮತ್ತು ಆವೇಶವನ್ನು ನಾವು ಗಳಿಸಬೇಕಾಗಿದೆ. ಯಾಕೆಂದರೆ ಇಂದು ನಾವು ಸತ್ಯ-ಮಿಥ್ಯಗಳ ಪೈಪೋಟಿಯ ಭೀಕರ ಪ್ರವಾಹದಲ್ಲಿ ಸಿಲುಕಿದ್ದೇವೆ.

ಆದರೆ ಆ ವಾಕ್ಯಗಳ ನೈಜ ಉದ್ದೇಶಗಳನ್ನು ಗ್ರಹಿಸದೆ ಕೆಲವರು ತೀವ್ರ ತಪ್ಪು ತಿಳುವಳಿಕೆಯಲ್ಲಿ ಸಿಲುಕುತ್ತಾರೆ. ಅವರು ಈ ರೀತಿ ಪ್ರಶ್ನಿಸುತ್ತಾರೆ: ಒಳಿತಿಗೆ ಶಾಶ್ವತ ಬೆಲೆಯಿದ್ದು ಅದು ಮಾನವ ಪ್ರಕೃತಿಗೆ ಯೋಗ್ಯವಾದುದೆಂದಾದರೆ ಒಳಿತು ಕಡಿಮೆಯಾಗಿ ಕೆಡುಕು ಪ್ರಬಲವಾಗಲು ಕಾರಣವೇನು? ಸತ್ಯವಂತರ ಸಂಖ್ಯೆ ಕಡಿಮೆಯಾಗಿ ಕಪಟಿಗಳ ಸಂಖ್ಯೆ ಹೆಚ್ಚಲು ಕಾರಣವೇನು?

ಕೆಲವರು ಇನ್ನಷ್ಟು ಮುಂದುವರಿದು ಹೀಗೆ ಪ್ರಶ್ನಿಸುತ್ತಾರೆ.

ಇಸ್ಲಾಮ್ ಸತ್ಯ ವ್ಯವಸ್ಥೆಯಾಗಿದ್ದರೆ, ಅದು ಎಷ್ಟು ಕಾಲ ನಡೆದಿದೆ? ಕೇವಲ 30 ವರ್ಷವಲ್ಲವೇ? ಹೀಗಿರುತ್ತಾ ಭವಿಷ್ಯದಲ್ಲಿ ಅದರಿಂದ ಏನೆಲ್ಲಾ ನಿರೀಕ್ಷಿಸಬಹುದು? ತತ್ವ ಮತ್ತು ದೃಷ್ಟಾಂತಗಳ ಆಧಾರಗಳಲ್ಲಿ ಇಸ್ಲಾಮಿನ ಸತ್ಯಾವಸ್ಥೆಯನ್ನು ಅಂಗೀಕರಿಸುವುದು ಅನಿವಾರ್ಯವಾದಾಗ ಕೆಲವರು ತರ್ಕಹೀನ ಅಸಂತೃಪ್ತಿಯಿಂದ ಅಂತಹ ಸಂಶಯವನ್ನು ಎತ್ತುತ್ತಾರೆ.

ಇಸ್ಲಾಮೀ ವ್ಯವಸ್ಥೆಯನ್ನು ವಿರೋಧಿಸುವ ಕೆಲವು ಮುಸ್ಲಿಮ್ ನಾಮಧಾರಿಗಳು ಪದೇ ಪದೇ ಈ ಪ್ರಶ್ನೆಗಳನ್ನು ಕೇಳುತ್ತಾರೆ. ಇತರ ದೇಶಗಳ ಮಾತಂತಿರಲಿ. ಇಸ್ಲಾಮೀ ವ್ಯವಸ್ಥೆಯನ್ನು ಸ್ಥಾಪಿಸುವ ದೃಢ ನಿರ್ಧಾರದ ಘೋಷಣೆಯಿಂದ ರೂಪು ತಾಳಿದ ಪಾಕಿಸ್ತಾನದಲ್ಲಿಯೂ, ಆರಂಭದಲ್ಲಿ ಇಸ್ಲಾಮೀ ವ್ಯವಸ್ಥೆಯ ಬೇಡಿಕೆ ಜಾಗೃತವಾದಾಗ ಈ ಪ್ರಶ್ನೆಗಳು ಭುಗಿಲೆದ್ದವು. ತನ್ಮಧ್ಯೆ ಸ್ವಲ್ಪ ದಿನ

ಸದೃಢಗಿದರೂ ಇಸ್ಲಾಮಿೂ ಸಂವಿಧಾನವು ಕಾರ್ಯರಂಗಕ್ಕಿಳಿದ ತಕ್ಷಣವೇ ಅದು ಪುನಃ ಕೇಳಿ ಬರಲಾರಂಭಿಸಿತು. ಸ್ವಗೃಹದಲ್ಲಿಯೇ ಇಸ್ಲಾಮಿನ ಸ್ಥಿತಿ ಹೀಗಿರುವಾಗ ಇತರೆಡೆಗಳ ವಿಷಯ ಹೇಳಿ ಪ್ರಯೋಜನವಿಲ್ಲ. ಒಟ್ಟಿನಲ್ಲಿ ಆ ಸಮಸ್ಯೆಯ ಕುರಿತು ವಿಸ್ತಾರವಾಗಿ ಚರ್ಚಿಸುವುದು ಅನಿವಾರ್ಯವಾಗಿದೆ.

ಈ ಪ್ರಶ್ನೆಗಳೆಲ್ಲವೂ ಪ್ರಸ್ತುತ ಕುರ್‌ಆನ್ ವಾಕ್ಯಗಳ ನೀತಿಗೆ ತೀರಾ ವಿರುದ್ಧವಾಗಿದೆ. ಬುದ್ಧಿ ಮತ್ತು ತರ್ಕಬದ್ಧವಾಗಿ ಮುಸ್ಲಿಮರು ದೃಢವಾಗಿ ನಂಬಿದ ಸತ್ಯಕ್ಕಾಗಿ ಹೋರಾಡುತ್ತಿರುವಾಗ, ಸತ್ಯಕ್ಕೆ ಜಯವಾಗುವುದೆಂದು ದೃಢವಾಗಿ ನಂಬುವ ಮೂಲಕ ಅವರ ಸತ್ಯಸೇವಾ ಮನೋಭಾವ ಮತ್ತು ದೃಢ ನಿಶ್ಚಯವನ್ನು ಸಕ್ರಿಯವಾಗಿಸುವುದೇ ಪ್ರಸ್ತುತ ಆಯತ್‌ಗಳ ಉದ್ದೇಶವಾಗಿತ್ತು. ಆದರೆ ಇಂದು ಆ ಪ್ರಶ್ನೆಗಳನ್ನು ವಿಚಾರ ಮತ್ತು ಬುದ್ಧಿಯಿಂದ ಇಸ್ಲಾಮನ್ನು ನಂಬಿ ಅದರ ಸಂಸ್ಥಾಪನೆಗಾಗಿ ದುಡಿಯುತ್ತಿರುವವರನ್ನು ಆ ಕಾರ್ಯದಿಂದ ಹಿಂಜರಿಸಲು ಅಥವಾ ಕಡಿಮೆ ಪಕ್ಷ ಅವರ ಮನೋಸ್ಥೈರ್ಯವನ್ನು ಚಂಚಲ ಗೊಳಿಸಲಿಕ್ಕಾಗಿ ಎತ್ತಲಾಗುತ್ತದೆ. ಇಸ್ಲಾಮಿೂ ವ್ಯವಸ್ಥೆಯ ವಿಜಯಕ್ಕೆ ಮೊಟ್ಟಮೊದಲಾಗಿ ಕಠೋರ ತ್ಯಾಗ ಪರಿಶ್ರಮಗಳ ಅಗತ್ಯವಿದೆ. ಅಥವಾ ಸಂದರ್ಭವಶಾತ್ ಎಂದಾದರೂ ವಿಜಯಭೇರಿ ಬಾರಿಸಿದರೂ ಅತಿ ಶೀಘ್ರ ಅವ್ಯವಸ್ಥಿತವಾಗುವ ಕೆಲವು ಅಜ್ಞಾತ ಕೊರತೆಗಳು ನೈಸರ್ಗಿಕವಾಗಿ ಅದರಲ್ಲಿದೆ ಎಂಬ ತಪ್ಪು ಭಾವನೆಗಳನ್ನು ಸತ್ಯವಿಶ್ವಾಸಿಗಳ ಮನಸ್ಸಿನಲ್ಲಿ ಮೂಡಿಸಬೇಕೆಂದು ಈ ಪ್ರಶ್ನಾರ್ಥಿಗಳು ಬಯಸುತ್ತಾರೆ.

ಆದರೆ ಈ ಬಾಲಿಶ ಪ್ರಶ್ನೆಗಳನ್ನು ಅಷ್ಟೇ ಬಾಲಿಶ ರೀತಿಯಲ್ಲಿ ಸ್ವೀಕರಿಸುವುದು ದುರದೃಷ್ಟಕರ! ತರುವಾಯ ಆ ಪ್ರಶ್ನೆಗಳ ಬೆಳಕಿನಲ್ಲಿ ಅತ್ಯಂತ ಬಾಲಿಶ ದೃಷ್ಟಿಯಿಂದ, ಮಾನವೇತಿಹಾಸ ಮತ್ತು ನಾಗರಿಕತೆಯನ್ನು ದರ್ಶಿಸಿ ಅಷ್ಟೇ ಕ್ಷುಲ್ಲಕ ವಿಚಾರಗಳಿಂದ ಅದಕ್ಕೊಂದು ವೈಶಿಷ್ಟ್ಯವನ್ನು ಕಂಡು ಹಿಡಿಯುತ್ತಾರೆ.

ಆದರೆ ಈ ಬಗ್ಗೆ ಕೆಲವು ಪ್ರಾಮುಖ್ಯ ವಿಚಾರಗಳನ್ನು ಗಮನಿಸಬೇಕಾಗಿದೆ. ಅವುಗಳ ಅರಿವಿಲ್ಲದಿರುವುದರಿಂದಲೇ ಜನರು ಇಂತಹ ಭೀಕರ ತಪ್ಪು ತಿಳುವಳಿಕೆಗಳಿಗೆ ಸಿಲುಕಿದ್ದಾರೆ. ಈ ಪ್ರಶ್ನೆಗಳ ಉತ್ತರದಲ್ಲಿ ಪ್ರಸ್ತುತ ವಿಚಾರಗಳನ್ನು ನಿಮ್ಮ ಮುಂದಿರಿಸುತ್ತೇನೆ.

ಮೊದಲು ನಾವು ಆ ಪ್ರಶ್ನೆಗಳನ್ನು ಎರಡು ಭಾಗಗಳಾಗಿ ವಿಂಗಡಿಸೋಣ. ಒಂದನೇಯದಾಗಿ ಸತ್ಯಕ್ಕೆ ಸೋಲು ಮತ್ತು ಮಿಥ್ಯಕ್ಕೆ ಜಯವಿದೆಯೇ? ಎರಡನೇಯದಾಗಿ ಸತ್ಯ ವ್ಯವಸ್ಥೆಯು ಕೇವಲ ಮೂವತ್ತು ವರ್ಷ ನಡೆಯಲು ಕಾರಣವೇನು?

# ಸತ್ಯಕ್ಕೆ ಸೋಲು, ಮಿಥ್ಯಕ್ಕೆ ಗೆಲು

## ಮೂಲತತ್ವ:

ಈ ಪ್ರಶ್ನೆಯ ಉತ್ತರವನ್ನು ತಿಳಿಯುವುದಕ್ಕಿಂತ ಮುಂಚಿತವಾಗಿ ಒಂದು ವಿಷಯವನ್ನು ನಾವು ಗ್ರಹಿಸಿರಬೇಕು. ಸತ್ಯಕ್ಕೆ ಸೋಲು ಮತ್ತು ಮಿಥ್ಯಕ್ಕೆ ಗೆಲೆನ್ನುವುದಕ್ಕೆ ವಾಸ್ತವದಲ್ಲಿ ಯಾವ ಅರ್ಥವೂ ಇಲ್ಲ. ಸೋಲು ಗೆಲುವುಗಳು ಕೇವಲ ಮಾನವನಿಗೆ ಸಂಬಂಧಿಸಿದೆ. ಮಾನವರೆಲ್ಲರೂ ಸತ್ಯವನ್ನು ಸ್ವೀಕರಿಸುವಂತಿಲ್ಲವೆಂದು ಊಹಿಸಿದರೂ ಸತ್ಯವು ಸೋಲುವುದಿಲ್ಲ. ಸತ್ಯವನ್ನು ನಿರಾಕರಿಸಿ ಅದರ ಸತ್ಫಲಗಳನ್ನು ಕಳಕೊಳ್ಳುವ ಭಾಗ್ಯಹೀನ ಮನುಷ್ಯನೇ ನಿಜವಾಗಿಯೂ ಸೋಲುತ್ತಾನೆ. ಸತ್ಯವು ಒಂದು ಸಿದ್ಧಾಂತ. ಆ ಸಿದ್ಧಾಂತವು ಸರಿಯಾಗಿದ್ದರೆ ಅದನ್ನು ಲೋಕವಿಡೀ ಅಂಗೀಕರಿಸಿದರೂ ಅಥವಾ ಯಾರೊಬ್ಬರೂ ಅಂಗೀಕರಿಸದಿದ್ದರೂ ಅದೊಂದು ಸತ್ಯ ಸಿದ್ಧಾಂತವಾಗಿಯೇ ಉಳಿಯುವುದು. ಉದಾ: ಆರೋಗ್ಯವು ಸತ್ಯಸಿದ್ಧವಾದ ವೈದ್ಯಕೀಯ ಸಿದ್ಧಾಂತವಾಗಿದೆ. ಅದನ್ನು ಒಬ್ಬನು ಸ್ವೀಕರಿಸಿದರೂ ಅದು ಸತ್ಯವಾಗಿರುವುದು. ಅದರಂತೆ ವರ್ತಿಸದಿದ್ದರೂ ಅದು ಸತ್ಯವಾಗಿಯೇ ಉಳಿಯುವುದು. ಆದರೆ ಸತ್ಯ ಸಿದ್ಧಾಂತವನ್ನು ಸ್ವೀಕರಿಸುವ ವ್ಯಕ್ತಿಯನ್ನು ಮಾತ್ರ ನಾವು ಜಯಶಾಲಿಯೆಂದು ಪರಿಗಣಿಸುತ್ತೇವೆ. ಇನ್ನು ಬೆಳಕಿನ ಉದಾಹರಣೆಯನ್ನು ತೆಗೆದುಕೊಳ್ಳೋಣ. ಒಬ್ಬನು ತನಗೆ ಬೆಳಕು ಬೇಡವೆಂದು ಕಣ್ಣುಮುಚ್ಚಿ ನಡೆಯಲಾರಂಭಿಸಿದರೆ ಅವನು ಎಡವಿ ಬೀಳಬೇಕಾಗುವುದು. ಅವನೇ ಸೋಲಬೇಕಾಗುವುದು. ಆದರೆ ಬೆಳಕು ಸೋಲುವ ಪ್ರಶ್ನೆಯೇ ಇಲ್ಲ. ಬೆಳಕಿಗೆ ನಿರ್ದಿಷ್ಟ ಸ್ಥಾನವೂ ಇಲ್ಲ. ಅದು ಕಾಲಿನಿಂದ

ನಡೆಯಬೇಕಾಗಿಲ್ಲ. ಅದಕ್ಕೆ ಎಡವಿ ಬೀಳಬಹುದೆಂಬ ಭೀತಿಯಿಲ್ಲ. ಸೋಲು ಗೆಲುವಿನ ಮಧ್ಯೆ ಸಿಲುಕಿ ಸಂಕಟಪಡಬೇಕಾಗಿಯೂ ಇಲ್ಲ. ಓರ್ವನು ಅದನ್ನು ಸಂಪೂರ್ಣ ನಂದಿಸಿದರೂ ಅವನೇ ಸೋಲುತ್ತಾನೆಯೇ ವಿನಾ ಬೆಳಕು ಸೋಲುವುದಿಲ್ಲ. ಈ ವಾಸ್ತವಿಕಾಂಶವನ್ನು ಮನದಲ್ಲಿಟ್ಟು ಮುಂದುವರಿಯೋಣ.

## ಸತ್ಯ ಮತ್ತು ಮಿಥ್ಯದ ಬೆಲೆ

ಕತ್ತಲೆಯನ್ನು ಮೆಚ್ಚುವವನು ಅದಕ್ಕಾಗಿ ಹೆಚ್ಚು ಶ್ರಮಪಡಬೇಕಾಗಿಲ್ಲ. ಆದರೆ ಬೆಳಕನ್ನು ಬಯಸುವವನು ಎಣ್ಣೆ, ಬತ್ತಿ ಮತ್ತು ದೀಪವನ್ನು ಸಿದ್ಧಪಡಿಸ ಬೇಕಾಗುವುದು! ಆರೋಗ್ಯವನ್ನು ಕೆಡಿಸಬಯಸಿದರೆ ಅದು ಬಹಳ ಸುಲಭದ ಕೆಲಸ. ಆದರೆ ಆರೋಗ್ಯ ಕೆಟ್ಟರೆ ಅದನ್ನು ಗುಣಪಡಿಸುವುದು ಅಥವಾ ಆರೋಗ್ಯವನ್ನು ಕಾಪಾಡುವುದು ಅಷ್ಟೊಂದು ಸುಲಭವಲ್ಲ. ಅದಕ್ಕಾಗಿ ಶುದ್ಧ ಗಾಳಿ, ವ್ಯಾಯಾಮ, ಸ್ನಾನ, ಶುಚಿತ್ವ, ಪೋಷಕ ಆಹಾರ, ಕೆಲಸ, ನಿದ್ರೆ ಮತ್ತು ವಿಶ್ರಾಂತಿಯ ವ್ಯವಸ್ಥೆ ಮನೋವಿಕಾರಗಳ ಹತೋಟಿ ಇತ್ಯಾದಿಗಳ ಬಗ್ಗೆ ನಿಗಾ ವಹಿಸಬೇಕಾಗುತ್ತದೆ. ಈ ವಿಷಯ ಇನ್ನಷ್ಟು ಸ್ಪಷ್ಟವಾಗಲಿಕ್ಕಾಗಿ ಇನ್ನೊಂದು ಉದಾಹರಣೆಯನ್ನು ಕೊಡುತ್ತೇನೆ. ಉನ್ನತ ಗಿರಿ ಶಿಖರದಿಂದ ಕೆಳಗೆ ಬೀಳ ಬಯಸಿದರೆ, ಆ 'ಮಹಾಧ್ಯೇಯ' ಸಾಧನೆಗಾಗಿ ಸ್ವಲ್ಪ ಉರುಳಿದರೆ ಸಾಕು. ಬೇರೆ ಹೆಚ್ಚೇನೂ ಮಾಡಬೇಕಾಗಿಲ್ಲ. ಆದರೆ ಓರ್ವನು ಗಿರಿಯ ತಳದಿಂದ ಅದರ ಶಿಖರಕ್ಕೇರಬಯಸಿದರೆ ಆತನು ಭೂಮಿಯ ಗುರುತ್ವಾಕರ್ಷಣೆಯ ವಿರುದ್ಧ ಬಲಪ್ರಯೋಗಿಸಬೇಕಾಗುವುದು, ಕಾಲು ಬಳಲುವುದು, ಶ್ವಾಸ ಬಿಗಿಯುವುದು, ಹೃದಯ ಬಡಿತ ಜೋರಾಗುವುದು, ನರನಾಡಿಗಳು ದುರ್ಬಲವಾಗುವುದು, ರಕ್ತದ ಒತ್ತಡ ಹೆಚ್ಚುವುದು. ಆಗ ಮಾತ್ರ ಆತ ಗಿರಿ ಶಿಖರವನ್ನು ತಲಪುತ್ತಾನೆ. ಒಳಿತು-ಕೆಡುಕು, ಸತ್ಯ-ಮಿಥ್ಯಗಳ ವಿಚಾರದಲ್ಲಿಯೂ ಹೀಗೆಯೇ ಸಂಭವಿಸುವುದು. ದುರ್ಗುಣದ ಗಳಿಕೆಗೆ ವಿಶೇಷ ಕಷ್ಟಪಡಬೇಕಾಗಿಲ್ಲ. ಆದರೆ ಸದ್ಗುಣದ ಗಳಿಕೆಗೆ ಅತೀ ಹೆಚ್ಚು ಸಂಕಷ್ಟಗಳನ್ನು ಸಹಿಸಬೇಕಾಗುವುದು. ತರುವಾಯ ಅದನ್ನು

ಕಾಪಾಡಿಕೊಳ್ಳಲು ಹಲವು ಕ್ರಮಗಳನ್ನು ಪಾಲಿಸಬೇಕಾಗುವುದು. ನೀವು ಕೆಟ್ಟ ಹೆಸರೆಂಬ ವಸ್ತುವನ್ನು ಖರೀದಿಸಲು ಹೆಚ್ಚು ಬೆಲೆ ತೆರಬೇಕಾಗಿಲ್ಲ. ಆದರೆ ಒಳ್ಳೆಯ ಹೆಸರು ಮತ್ತು ಘನತೆ ಗೌರವಗಳೆಂಬ ಸರಕುಗಳನ್ನು ಗಳಿಸಬೇಕಾದರೆ, ನೀವು ನಿಮ್ಮ ಸಂಪಾದನೆಯನ್ನು ಸಂಪೂರ್ಣವಾಗಿ ವಿನಿಯೋಗಿಸಬೇಕಾಗುವುದು. ನೀವು ನಿಮ್ಮ ಗದ್ದೆಯಲ್ಲಿ ಪೊದರು ಮತ್ತು ಮುಳ್ಳುಗಂಟಿಯನ್ನು ಬೆಳೆಸಬಯಸಿದರೆ ಉಳುವ ಅಗತ್ಯವಿಲ್ಲ. ಗೊಬ್ಬರ ಅಥವಾ ನೀರು ಹಾಕಬೇಕಾಗಿಲ್ಲ. ಬೇಲಿ ಹಾಕಿ ಕಾದು ಬಳಲಬೇಕಾಗಿಲ್ಲ. ಆ 'ಅಮೂಲ್ಯ ಬೆಳೆ'ಯು ತನ್ನಿಂತಾನೇ ಬೆಳೆಯುವುದು. ಗದ್ದೆಯನ್ನು ಬಂಜರು ಬಿಟ್ಟರೆ ಸಾಕು! ಆದರೆ ಒಂದು ಉದ್ಯಾನವನ ಅಥವಾ ದವಸ ಧಾನ್ಯಗಳನ್ನು ಬೆಳೆಸಬಯಸಿದರೆ ನೀವು ಭೂಮಿಯನ್ನು ಚೆನ್ನಾಗಿ ಉಳುತ್ತೀರಿ. ಕಳೆ ಕೀಳುತ್ತೀರಿ. ಗೊಬ್ಬರ ಹಾಕುತ್ತೀರಿ. ನೀರು ಹೊಯ್ಯುತ್ತೀರಿ ಮತ್ತು ಬಹಳ ಜಾಗ್ರತೆಯಿಂದ ಅದನ್ನು ಕಾಪಾಡುತ್ತೀರಿ. ಹಾಗಾದರೆ ಮಾತ್ರ ನಿಮ್ಮ ಉದ್ದೇಶ ಸಫಲವಾಗುವುದು. ಸತ್ಯಕ್ಕೆ ಶ್ರಮ ಅಗತ್ಯ. ಅಸತ್ಯವು ಅನಾಯಾಸವಾಗಿ ದೊರೆಯುವುದು. ಒಳಿತಿಗೆ ದುಬಾರಿ ಬೆಲೆ ತೆರಬೇಕಾಗುವುದು. ಕೆಡುಕನ್ನು ಚಿಕ್ಕಾಸಿಲ್ಲದೆಯೇ ಧಾರಾಳ ಸಂಪಾದಿಸಬಹುದು. ನೈತಿಕ ಗುಣಗಳಿಗೆ ದೃಢಚಿತ್ತ ಮತ್ತು ತರಬೇತಿ ಅಗತ್ಯ. ಅನೈತಿಕ ಗುಣಕ್ಕೆ ನಿರ್ಲಕ್ಷ್ಯ ಮತ್ತು ಅಸಡ್ಡೆಗಳೇ ಸಾಕು!

ಈಗೊಮ್ಮೆ ಆಲೋಚಿಸಿ ನೋಡಿರಿ. ಉತ್ತಮ ಬೆಳೆಗೆ ಅತ್ಯಗತ್ಯವಾಗಿರುವ ದುಡಿಮೆ, ಶ್ರದ್ಧೆಗಳನ್ನು ತೊರೆದು ಭೂಮಿಯನ್ನು ಬಂಜರು ಬಿಟ್ಟರೆ ಸೋಲು ಯಾರಿಗೆ? ಅವನಿಗೋ ಅಥವಾ ಬೆಳೆಗೋ? ಆರೋಗ್ಯ ನಿಯಮಗಳನ್ನು ಪಾಲಿಸದೆ ಓರ್ವನು ರೋಗಿಯಾದರೆ ಸೋಲು ರೋಗಿಗೋ ಅಥವಾ ಆರೋಗ್ಯದ ನಿಯಮಗಳಿಗೋ? ಸತ್ಯ ಮತ್ತು ಸನ್ಮಾರ್ಗವೆಂಬ ಸಂಪತ್ತನ್ನೂ, ಸತ್ಕರ್ಮ, ಸದ್ಗುಣವೆಂಬ ಅಮೂಲ್ಯ ಸಾಮಗ್ರಿಗಳನ್ನೂ ಖರೀದಿಸಲಿಕ್ಕಾಗಿ ಪರಿಶ್ರಮವೆಂಬ ಬೆಲೆ ತೆರಲು ಓರ್ವ ತಯಾರಿಲ್ಲದಿದ್ದರೆ, ತನ್ಮೂಲಕ ಸತ್ಯ ಮತ್ತು ಸತ್ಕರ್ಮಗಳೆಂದೂ ಸೋಲಲಾರವು. ಬದಲಾಗಿ ಆ ವ್ಯಕ್ತಿಯೇ ಸೋಲನು ಭವಿಸುವನು.

# ವ್ಯತ್ಯಾಸದ ಮಾನದಂಡ

ಸತ್ಯವು ತುಟ್ಟಿಯಾಗಿದೆ. ಮಿಥ್ಯವು ಅಗ್ಗವಾಗಿದೆ. ಕೆಡುಕಿಗಾಗಿ ಸ್ವೇಚ್ಛೆಯಂತೆ ಜೀವಿಸಿದರೆ ಸಾಕು. ಬೇರೇನೂ ಮಾಡಬೇಕಾಗಿಲ್ಲ. ಆದರೆ ಈ ವಾಸ್ತವಿಕಾಂಶಗಳನ್ನು ನಿರ್ಲಕ್ಷಿಸಿ ಜನರು ಜಗತ್ತಿನ ಮೇಲೊಮ್ಮೆ ಕಣ್ಣು ಹಾಯಿಸಿದಾಗ ಕಾಣಿಸುವುದೇನು? ಸತ್ಯಸಂಧರು ಕಡಿಮೆ, ಮೋಸಗಾರರು ಹೆಚ್ಚು, ಸತ್ಕರ್ಮಗಳಲ್ಲಿ ನಿರತರಾಗಿರುವವರಿಗಿಂತ ದುಷ್ಕರ್ಮಿಗಳು ಅಧಿಕ ಸಂಖ್ಯೆಯಲ್ಲಿರುವರೆಂಬುದು ಅವರಿಗೆ ಕಂಡು ಬರುತ್ತದೆ. ಆಗ ಸ್ವಾಭಾವಿಕವಾಗಿ ಅವರ ಮನಸ್ಸಿನಲ್ಲಿ ಕೆಲವು ಪ್ರಶ್ನೆಗಳು ಉದ್ಭವಿಸುತ್ತವೆ. ಈ ಸತ್ಯವು ಹೇಗೆ ತಾನೇ ಸತ್ಯವಾಯಿತು? ಸದಾ ಕಾಲವೂ ಅಲ್ಪಸಂಖ್ಯಾತವಾಗಿ ಅಂಗೀಕರಿಸಲ್ಪಟ್ಟ ಈ ಒಳಿತುಗಳು ಹೇಗೆ ತಾನೇ ಒಳಿತಾದೀತು? ಮಿಥ್ಯದ ವಾಹಕರೂ ಕೆಡುಕಿನ ಭಕ್ತರೂ ಸದಾ ಬಹುಸಂಖ್ಯಾತ ರಾಗಿದ್ದಾರೆ. ಅದೇಕೆ ಹಾಗಾಯಿತು?

ನಿಸರ್ಗ ವ್ಯವಸ್ಥೆಯು ಸಂಪೂರ್ಣವಾಗಿ ಈ ಬುನಾದಿಯಲ್ಲಿದೆಯೆಂದಾದರೆ ಅದಕ್ಕೆ ಪರಿಹಾರವೇನು? ಯಾವುದು ಅಮೂಲ್ಯವಾಗಿದೆಯೋ ಅದೇ ಈ ಲೋಕದಲ್ಲಿ ಕಡಿಮೆ. ಅದರ ಪಾಲು ಪಡೆಯುವ ಭಾಗ್ಯವಂತರೂ ವಿರಳ. ತದ್ವಿರುದ್ಧವಾಗಿ, ನಿಕೃಷ್ಟ ವಸ್ತುಗಳು ಸುಲಭದಲ್ಲಿ ತಯಾರಾಗುತ್ತವೆ. ಅದನ್ನು ಸಂಗ್ರಹಿಸುವವರೂ ಸದಾ ಬಹುಸಂಖ್ಯೆಯಲ್ಲಿರುತ್ತಾರೆ. ಆದರೆ ನೀಚ ವಸ್ತುಗಳ ಸಮೃದ್ಧಿಯು ಅವುಗಳನ್ನು ಅಮೂಲ್ಯಗೊಳಿಸೀತೇ? ಅಮೂಲ್ಯ ವಸ್ತುಗಳ ಕೊರತೆಯು ಅವುಗಳನ್ನು ನೀಚಗೊಳಿಸೀತೇ? ಖಂಡಿತ ಇಲ್ಲ.

ಈ ದೇವ ನಿರ್ಮಿತ ಭೂಮಿಯಲ್ಲಿ ಹುಲ್ಲು ಪೊದರುಗಳು ಧಾರಾಳವಾಗಿ ಬೆಳೆಯುತ್ತವೆ. ಇನ್ನೊಂದೆಡೆ ಮಲ್ಲಿಗೆ, ಸಂಪಿಗೆ ಮತ್ತು ಗುಲಾಬಿ ಹೂ ಗಳೆಲ್ಲವೂ ವಿರಳ. ಕಸಗುಪ್ಪೆಗಳು ಇಲ್ಲಿ ರಾಶಿ ಬಿದ್ದಿದ್ದರೂ ಸುಗಂಧ ದ್ರವ್ಯ ಮತ್ತು ಸುವಾಸಿತ ಗಿಡ-ಬಳ್ಳಿಗಳು ಕಡಿಮೆ. ಇಲ್ಲಿ ಕಲ್ಲುಗಳಿಗೆ ಕ್ಷಾಮವಿಲ್ಲ. ಆದರೆ ರತ್ನಗಳು ಅಪರೂಪ. ತಾಮ್ರ, ಹಿತ್ತಾಳೆ, ತಗಡು ಮುಂತಾದುವುಗಳನ್ನು ದಿನಂಪ್ರತಿ ಅಧಿಕ ಪ್ರಮಾಣದಲ್ಲಿ ಭೂಮಿಯಿಂದ ಅಗೆದು ತೆಗೆಯಲಾಗುತ್ತಿದೆ. ಆದರೆ ಚಿನ್ನವು ಅಲ್ಪ ಪ್ರಮಾಣದಲ್ಲಿ ಮಾತ್ರ ದೊರೆಯುತ್ತದೆ. ಸಮುದ್ರದ

ಪ್ರತಿಯೊಂದು ತೆರೆಯೂ ಸಾವಿರಾರು ಚಿಪ್ಪುಗಳನ್ನು ಹೊರಕ್ಕೆಸೆಯುತ್ತದೆ. ಆದರೆ ಮುತ್ತಿನ ಚಿಪ್ಪು ದುರ್ಲಭ. ಹಾಲು ಕಡೆದರೆ ಮೊಸರು ಧಾರಾಳ ದೊರೆಯುತ್ತದೆ. ಆದರೆ ಬೆಣ್ಣೆ ಕಡಿಮೆ ಸಿಗುವುದು. ಕಾಡುಗಳಲ್ಲಿ ಸಾವಿರಾರು ಜಿಂಕೆಗಳು ನೆಗೆದಾಡುತ್ತಿರುವಾಗ ಕಸ್ತೂರಿ ಮೃಗವು ಅಪೂರ್ವವಾಗಿ ಕಾಣಸಿಗುವುದು. ಅವಾಚ್ಯ ಶಬ್ದಗಳು ಬೀದಿ ಬೀದಿಗಳಲ್ಲಿ ದಿನನಿತ್ಯ ಕೇಳಿ ಬರುತ್ತದೆ. ಆದರೆ ಉತ್ತಮ ಕವಿತೆ ಮತ್ತು ಸಾಹಿತ್ಯಗಳು ಅಪರೂಪಕ್ಕೊಮ್ಮೆ ಕೇಳಿಸುತ್ತವೆ. ರೋಗದಂತೆಯೇ ಅನಪೇಕ್ಷಿತ ವಿಷಯಗಳು ವ್ಯಾಪಕವಾಗಿದ್ದರೂ ಆರೋಗ್ಯ ಕಾಯರು ವಿರಳ. ಆದರೆ ಮಲ್ಲಿಗೆ, ಗುಲಾಬಿ ಹೂ, ದವಸ ಧಾನ್ಯ, ಸುಗಂಧ ದ್ರವ್ಯ, ಚಿನ್ನ, ರತ್ನ, ಮುತ್ತು, ಬೆಣ್ಣೆ, ಕಸ್ತೂರಿ, ಸಾಹಿತ್ಯ, ಕವಿತೆ, ಆರೋಗ್ಯ ಇತ್ಯಾದಿಗಳು ಕಡಿಮೆಯಾಗಿರುವುದರಿಂದ ಅವು ಪರಾಜಿತವೆಂದು ಹೇಳುವಂತಿಲ್ಲ. ಅದೇ ರೀತಿ ಮುಳ್ಳುಗಂಟಿ, ಕಳೆ, ಪೊದರು, ಕಸಗುಪ್ಪೆ, ತಾಮ್ರ, ಹಿತ್ತಾಳೆ, ಕಲ್ಲು, ಹಾಳುಹರಟೆ, ರೋಗ ಇತ್ಯಾದಿ ವಿಷಯಗಳು ಸಂಖ್ಯಾ ಪ್ರಮಾಣದಲ್ಲಿ ಅಧಿಕವಿರುವುದರಿಂದ ಅವು ಜಯಗಳಿಸಿವೆಯೆಂದು ಬುದ್ಧಿಯುಳ್ಳವರಾರೂ ಹೇಳಲಾರರು.

ಕೀಳ್ಮಟ್ಟದ ವಸ್ತುಗಳ ಖರೀದಿಗೆ ಅಮೂಲ್ಯ ವಸ್ತುಗಳ ಕಿಂಚಿತ್ ಭಾಗ ನೀಡಿದರೆ ಸಾಕೆಂಬುದನ್ನು ಮರೆಯಬಾರದು. ಎರಡನ್ನೂ ಒಂದೇ ಮಾರುಕಟ್ಟೆಯಲ್ಲಿ ಎದುರು-ಬದುರಾಗಿಟ್ಟರೆ ಸತ್ಯ ಮತ್ತು ಒಳಿತಿನ ಸ್ವಲ್ಪಂಶಕ್ಕೆ ಅಸತ್ಯ ಮತ್ತು ಕೆಡುಕಿನ ದೊಡ್ಡ ರಾಶಿಗಿಂತ ಹೆಚ್ಚು ಬೆಲೆ ದೊರೆಯುವುದು.

ಪವಿತ್ರ ಕುರ್‌ಆನ್ ಹೇಳುತ್ತದೆ:

"ಹೇಳಿರಿ, ಒಳಿತು-ಕೆಡುಕುಗಳು ಸಮಾನವಾಗಲಾರವು. ಕೆಟ್ಟ ವಸ್ತುಗಳ ಹೆಚ್ಚಳವು ನಿನ್ನನ್ನು ಅಚ್ಚರಿಗೊಳಿಸದಿರಲಿ". (ಅಲ್‌ಮಾಇದಃ 100)

ತುಚ್ಛ ವಸ್ತುಗಳನ್ನು ನಿಸರ್ಗದಲ್ಲಿ ಅವುಗಳ ಬೆಲೆಯನ್ನು ಇಳಿಸಿ ನೀಚ ಸ್ಥಾನದಲ್ಲಿ ನಿಲ್ಲಿಸಲಿಕ್ಕಾಗಿಯೇ ಹೆಚ್ಚು ಸೃಷ್ಟಿಸಲಾಗಿದೆ. ಅದೇ ಪ್ರಕಾರ ಉತ್ಕೃಷ್ಟ ವಸ್ತುಗಳ ಬೆಲೆ ಹೆಚ್ಚಿಸಿ ಸಜ್ಜನರ ದೃಷ್ಟಿಯಲ್ಲಿ ಅಮೂಲ್ಯ ಹಾಗೂ ಶ್ರೇಷ್ಠವೆಂದು ಮನ್ನಣೆ ಗಳಿಸಲಿಕ್ಕಾಗಿ ಅವುಗಳನ್ನು ವಿರಳಗೊಳಿಸಲಾಗಿದೆ. ಆದರೆ ರೂಢಿಯಲ್ಲಿರುವ ಈ ವ್ಯವಸ್ಥೆಯನ್ನು ನೀವು ಸಂಪೂರ್ಣವಾಗಿ ಬದಲಾಯಿಸಬಯಸುತ್ತೀರಾ? ನೈಸರ್ಗಿಕ ಮಾರುಕಟ್ಟೆಯಲ್ಲಿ ಚಿನ್ನದ ಬೆಲೆ ಕಡಿಮೆಯಾಗಬೇಕು. ತಾಮ್ರ ಮತ್ತು

ತಗಡಿನ ಬೆಲೆ ಹೆಚ್ಚಾಗಬೇಕು. ಮಲ್ಲಿಗೆ ಮತ್ತು ಗುಲಾಬಿ ಗಿಡಗಳು ಎಲ್ಲೆಡೆಯೂ ಸ್ವಚ್ಛಂದವಾಗಿ ಬೆಳೆಯಬೇಕು. ಆದರೆ ಮುಳ್ಳುಗಂಟಿ ಮತ್ತು ಪೊದರುಗಳನ್ನು ಬೆಳೆಸಲು ಕಠಿಣ ಶ್ರಮ ವಹಿಸಬೇಕು. ಉತ್ತಮ ಕವಿತೆಗಳ ಕಲೆ ಎಲ್ಲರಿಗೂ ಸುಲಭದಲ್ಲಿ ದೊರೆಯಬೇಕು. ಹಾಳು-ಹರಟೆಗಳ ಪ್ರತಿಭೆ ಕೆಲವು 'ವಿಶೇಷ ಬುದ್ಧಿವಂತ'ರಿಗೆ ಮಾತ್ರ ಕರಗತವಾಗಬೇಕು. ಆರೋಗ್ಯ ರಕ್ಷಣೆಗೆ ಯಾವ ಮುಂಜಾಗ್ರತೆಯ ಅಗತ್ಯವೂ ಇರಬಾರದು. ಆದರೆ ರೋಗಿಯಾಗಬೇಕಾದರೆ ತೀವ್ರ ಪ್ರಯತ್ನ ನಡೆಸಬೇಕು. ನಿರ್ಮಾಣ ಕಾರ್ಯಗಳು ತನ್ನಷ್ಟಕ್ಕೆ ನಡೆಯಬೇಕು. ಸಂಹಾರ ಕಾರ್ಯಗಳಿಗೆ ಮಾನವ ಸಾಮರ್ಥ್ಯಗಳನ್ನು ಬಳಸಬೇಕು. ಬೆಳಕನ್ನು ಬೆಳಗಿಸಲು ಯಾವ ವಸ್ತುವಿನ ಅಗತ್ಯವೂ ಇರಬಾರದು. ದೀಪ ಮತ್ತು ಬಲ್ಬುಗಳ ಬದಲಾಗಿ ಕತ್ತಲೆ ಹಬ್ಬಿಸಲು ಅನೇಕ ಉಪಕರಣಗಳು ಇರಬೇಕು. ಎವರೆಸ್ಟ್ ಶಿಖರಕ್ಕೇರಲು ದೈಹಿಕ ಶ್ರಮಗಳನ್ನು ವ್ಯಯಿಸುವ ಅಗತ್ಯವೇ ಇಲ್ಲ. ಬದಲಾಗಿ ಹೊಂಡಕ್ಕೆ ಬೀಳಲು ಶಕ್ತಿ-ಯುಕ್ತಿಗಳನ್ನು ಪ್ರಯೋಗಿಸಬೇಕು. ಸಜ್ಜನನಾಗಲು ಯಾವ ಕಷ್ಟವೂ ಇರಬಾರದು. ದುಷ್ಟನಾಗಲು ಸಾಹಿತ್ಯ, ವಿದ್ಯೆ, ಪ್ರಚಾರ, ಸಂಘಟನೆ, ಸರಕಾರ ಇತ್ಯಾದಿಗಳ ನೆರವು ಅನಿವಾರ್ಯವಾಗಬೇಕು. ಸತ್ಯದಲ್ಲಿ ಅಚಲವಾಗಿರಲು ಮಾನವನಿಗೆ ಕಷ್ಟವಾಗುವ ಯಾವ ಹೊಣೆಗಾರಿಕೆಗಳೂ ಇರಬಾರದು. ಅದಕ್ಕೆ ಪ್ರವಾದಿಗಳ, ಧರ್ಮಗ್ರಂಥಗಳ ಅಥವಾ ಮಾರ್ಗದರ್ಶಿಗಳ ಅಗತ್ಯವಿರಬಾರದು. ತದ್ವಿರುದ್ಧವಾಗಿ ನೀಚನಾಗಲು ಅವೆಲ್ಲವೂ ಬೇಕು ಎಂದೆಲ್ಲಾ ನೀವು ಆಲೋಚಿಸುತ್ತಿರುವಿರಾ?

ಸಂಕ್ಷಿಪ್ತದಲ್ಲಿ ಹೇಳುವುದಾದರೆ ಸ್ವರ್ಗವು ಮಾನವನಿಗೆ ಪುಕ್ಕಟೆ ದೊರೆಯಬೇಕು. ನರಕಕ್ಕೆ ಹೋಗಲು ಮಾನವನು ವಿಶೇಷ ತಪಸ್ಸು ಮತ್ತು ಭಜನೆ ಮಾಡಬೇಕು! ಇದೆಂತಹ ವಿಚಿತ್ರ ಬಯಕೆ!

ಪ್ರಚಲಿತವಿರುವ ನೈಸರ್ಗಿಕ ವ್ಯವಸ್ಥೆಯನ್ನು ಮನಸ್ಸಿನಲ್ಲೊಮ್ಮೆ ಬದಲಾಯಿಸಿ ನೋಡಿರಿ. ಆಗ ಜಗತ್ತಿನ ಚಿತ್ರವು ಹೇಗಿರಬಹುದು? ವಾಸ್ತವಿಕ ನಿಸರ್ಗ ವ್ಯವಸ್ಥೆಯಲ್ಲಿ ಉತ್ಕೃಷ್ಟ ಸೇವಾ ಪ್ರತಿಭೆಯುಳ್ಳ ಜನರು ವಿರಳವಾಗಿದ್ದು ಸಾಮಾನ್ಯ ಜನರು ಅಧಿಕವಿದ್ದಾರೆ. ತತ್ವಜ್ಞಾನಿಗಳು, ಸಂಶೋಧಕರು, ಆಧ್ಯಾತ್ಮಿಕ ಗುರುಗಳು, ಸುಧಾರಕರು, ಭಾಷಣಕರ್ತರು, ಗ್ರಂಥಕಾರರು, ಕವಿಗಳು ಮತ್ತು

ನಾಯಕರೇ ಮೊದಲಾದವರು ಸಾಮಾನ್ಯ ಜನರಿಗಿಂತ ಅಧಿಕವಾಗಿರುವುದಂತಿರಲಿ ಸಮಾನ ಸಂಖ್ಯೆಯಲ್ಲೂ ಇರುವುದಿಲ್ಲ. ಆ ಸ್ಥಾನ ಗಳಿಕೆಗೆ ವಿಶೇಷ ಪ್ರತಿಭೆಯಂತೆಯೇ ಸ್ವಪ್ರಯತ್ನ ಮತ್ತು ತರಬೇತಿಗಳ ಅಗತ್ಯವಿದೆ. ಆದರೆ ಪಾಮರನಾಗಲು ಏನೂ ಕಷ್ಟವಿಲ್ಲ! ಸತ್ಯ ಸಿದ್ಧಾಂತಗಳಲ್ಲಿ ಅಚಲವಾಗಿ ನಿಂತು ಒಳಿತಿನ ಮಾರ್ಗದೀಪದಿಂದ ಉತ್ಕೃಷ್ಟ ಗುಣ-ನಡತೆಗಳನ್ನು ಮೈಗೂಡಿಸುವ ಜನರ ಅವಸ್ಥೆಯೂ ಹೀಗೆಯೇ. ಪ್ರಥಮವಾಗಿ ಅವರಲ್ಲಿ ಸ್ವಲ್ಪ ಸಹಜ ನಿಷ್ಕಳಂಕತೆ ಇರಬೇಕು. ಅಲ್ಲದೆ ಅವರು ಸ್ವಯಂ ತ್ಯಾಗ ಪರಿಶ್ರಮಗಳ ಮೂಲಕ ಅತ್ಯಧಿಕ ಸಾಮರ್ಥ್ಯಗಳನ್ನು ಗಳಿಸಬೇಕು.

ಹೀಗಿರುತ್ತಾ, ಸತ್ಯದಲ್ಲಿ ಅಚಲವಾಗಿದ್ದು, ಸತ್ಕರ್ಮ ನಿರತರಾಗಿರುವವರು ಕಡಿಮೆಯಿರುವುದರಿಂದ ಸತ್ಯ ಮತ್ತು ಸತ್ಕರ್ಮಗಳು ಪರಾಜಿತ ಶಕ್ತಿಗಳೆನಿಸುವುದಿಲ್ಲ. ಅಂತೆಯೇ ಮಿಥ್ಯವನ್ನು ಅಂಗೀಕರಿಸಿ ದುರ್ಮಾರ್ಗದಲ್ಲಿ ಚಲಿಸುವವರ ಸಂಖ್ಯಾಬಲ ಅಧಿಕವಿರುವುದರಿಂದಾಗಿ ಪ್ರಸ್ತುತ ಶಕ್ತಿಗಳು ವಿಜಯ ಸಂಕೇತವಲ್ಲ. ಸತ್ಯದ ಉತ್ತುಂಗ ಶಿಖರಕ್ಕೇರುವ ಪ್ರಯತ್ನಗಳನ್ನು ಸಾಧಿಸುವವರೇ ಜಯಶಾಲಿಗಳು. ಆ ಸ್ಥಾನಕ್ಕೇರುವ ಧೈರ್ಯವಿಲ್ಲದೆ ಹೇಡಿಗಳಾಗಿ ಮಿಥ್ಯದ ಕೆಸರ ಹೊಂಡದಲ್ಲಿ ಬಿದ್ದಿರುವುದರಿಂದ ಕೆಸರ ಹೊಂಡವು ಪರ್ವತ ಶಿಖರಗಳಿಗಿಂತ ಶ್ರೇಷ್ಠವೆಂದು ಪರಿಗಣಿಸಲಾಗದು. ಕೆಲವೇ ಮಂದಿ ಉನ್ನತ ಶಿಖರವನ್ನು ತಲುಪುವುದರಿಂದ ಅದು ಕೆಸರ ಹೊಂಡಕ್ಕಿಂತ ಹೀನವಾಗುವುದಿಲ್ಲ.

## ಒಳಿತಿನ ವೇಷ ತೊಟ್ಟ ಕೆಡುಕು

'ಏ' ಚಾ ಹುಡಿಯು ಅತ್ಯಂತ ಜನಪ್ರಿಯ ಮತ್ತು ಉತ್ತಮವೆಂದು ಊಹಿಸೋಣ. ಅದಕ್ಕೆ ಸರಿಸಾಟಿಯಾಗಬಲ್ಲ ಚಹಾ ನಿರ್ಮಿಸಲಾಗದೆ, ನಮ್ಮ ಚಾ ಹುಡಿಯು ತುಂಬಾ ಕೆಳಮಟ್ಟದಲ್ಲಿದೆಯೆಂದು ಭಾವಿಸುವ ಇನ್ನೊಂದು ಕಂಪೆನಿಯು ಜನಪ್ರಿಯತೆಗಾಗಿ ಯಾವ ತಂತ್ರ ಹೂಡಬಹುದು? ಅವರು ಇನ್ನೇನು ತಾನೇ ಮಾಡಿಯಾರು? ಪ್ರಥಮವಾಗಿ 'ಏ' ಚಹಾದೊಂದಿಗೆ ಸಾಮ್ಯತೆಯಿರುವ ಹೆಸರನ್ನು ಇರಿಸುತ್ತಾರೆ. ಅದಕ್ಕೆ ಸಮಾನವಾದ ಲಾಂಛನವಿರಿಸುತ್ತಾರೆ. ಹೊದಿಕೆಗಳನ್ನೂ

ಅದರಂತೆ ತಯಾರಿಸುತ್ತಾರೆ. ಈ ರೀತಿ ಬಾಹ್ಯ ನೋಟದಿಂದ ವಂಚಿತರಾಗುವ ಅನೇಕ ಮಂದಿ ಅದನ್ನು ಖರೀದಿಸುವಂತೆ ಮಾಡುವರು. ಈ ತಂತ್ರವನ್ನು ಪ್ರಯೋಗಿಸುವ ಮೂಲಕ ಆ ಕಂಪೆನಿಯು 'ಏ' ಚಾ ಹುಡಿಯೇ ಅತ್ಯುತ್ತಮವೆಂಬುದನ್ನು ಸ್ವಯಂ ಒಪ್ಪಿದಂತಾಗುತ್ತದೆ. ತರುವಾಯ ಆ ಕಂಪೆನಿಯು ತನ್ನ ವ್ಯಾಪಾರವನ್ನು ವೃದ್ಧಿಗೊಳಿಸಿದಂತೆಲ್ಲಾ 'ಏ' ಚಾ ಹುಡಿಗೆ ಮಾರಾಟ ಸುಲಭವಾಗುವುದು. ಹಾಗೆಯೇ ಹಿತ್ತಾಳೆಯ ಉಂಗುರಕ್ಕೆ ಚಿನ್ನದ ಒಪ್ಪ ಹಾಕಿಸಿ ಅಂಗಡಿಗೆ ತರುವವನು ವಾಸ್ತವದಲ್ಲಿ ಚಿನ್ನದ ಮಹತ್ವ ಮತ್ತು ಬೆಲೆಯನ್ನು ಪ್ರಚುರಪಡಿಸುತ್ತಾನೆ.

ಸತ್ಯ ಮತ್ತು ಮಿಥ್ಯಗಳ ಸ್ಥಿತಿಯೂ ಸಾಮಾನ್ಯವಾಗಿ ಇದೇ ರೂಪದಲ್ಲಿದೆ. ಮಾನವನ ನಾಗರಿಕ ಹಾಗೂ ನೈತಿಕ ಇತಿಹಾಸವನ್ನು ಅವಲೋಕಿಸಿದರೆ ಅಸತ್ಯ ಮತ್ತು ಕೆಡುಕುಗಳು ಸದಾ ಒಳಿತು ಮತ್ತು ಸತ್ಯದ ರೂಪದಲ್ಲಿ ಪ್ರಕಟಗೊಳ್ಳುತ್ತಿತ್ತೆಂದು ವ್ಯಕ್ತವಾಗುತ್ತದೆ. ತಪ್ಪು ಜಯಿಸಬೇಕಾದರೆ ಅದು ಸರಿಯ ವೇಷ ತೊಡಬೇಕಾಗಿತ್ತು. ಕೇಡಿಗೆ ಪ್ರಚಾರ ದೊರೆಯಬೇಕಾದರೆ ಅದು ಸದಾ ಕಾಲವೂ ಒಳಿತಿನ ಅಂಗಿ ತೊಡಬೇಕಾಗಿತ್ತು. ಅಸತ್ಯ ಮತ್ತು ಕೆಡುಕುಗಳ ಈ ಕಾರ್ಯ ಶೈಲಿಯ ವಿಮರ್ಶೆ ನಡೆಸಿದರೆ ನಾವು ಒಂದು ವಿಚಾರವನ್ನು ಅನಿವಾರ್ಯವಾಗಿ ಒಪ್ಪಬೇಕಾಗುವುದು. ಸ್ಥಾನಮಾನ ಮತ್ತು ಯಶಸ್ಸುಗಳು ಕೇವಲ ಒಳಿತು, ಸನ್ಮಾರ್ಗ ಮತ್ತು ಸತ್ಯ ವ್ಯವಸ್ಥೆಗೆಂಬ ವಾಸ್ತವಿಕಾಂಶವನ್ನು ಸ್ವಯಂ ಒಪ್ಪಿಕೊಂಡೇ ಅಸತ್ಯ, ಕೆಡುಕು ಮತ್ತು ನೀಚ ಪದ್ಧತಿಯ ವಾಹಕರೆಲ್ಲರೂ ತಮ್ಮ ಕಾರ್ಯ ಆರಂಭಿಸಿದ್ದರು.

ಸುಳ್ಳುಗಾರನು ತಾನು ಸತ್ಯವಂತನೆಂದು ಸಮರ್ಥಿಸುವುದನ್ನು ನೀವು ನೋಡಿರಬಹುದು. ಆದರೆ ನಾನು ಸುಳ್ಳುಗಾರನೆಂದು ಸಮರ್ಥಿಸುವ ಯಾವನಾದರೂ ಸತ್ಯಸಂಧನನ್ನು ನೀವು ನೋಡಿದ್ದೀರಾ. ಸುಳ್ಳು ಪ್ರಚಾರಕನು ತಾನು ಸತ್ಯಸಂಧನೆಂದು ಘೋಷಿಸುವುದನ್ನು ನೀವು ಕೇಳಿರಬಹುದು. ಆದರೆ ಸತ್ಯ ಪ್ರಚಾರಕನೋರ್ವನು ತಾನು ಸುಳ್ಳು ಪ್ರಚಾರಕನೆಂದು ಸಾಬೀತುಪಡಿಸಲು ಯತ್ನಿಸುವುದನ್ನು ನೀವು ಎಂದಾದರೂ ಕಂಡಿದ್ದೀರಾ? ನೀಚತೆಯ ದಾಸರು ತಾವು ಅಪ್ಪಟ ಸತ್ಯಮಾರ್ಗದಲ್ಲಿ ಜೀವಿಸುತ್ತಿರುವೆವೆಂದು ಸಾಬೀತುಪಡಿಸಲು ಹವಣಿಸುತ್ತಿರುವುದನ್ನು ನೀವು

ನೋಡಿರಬಹುದಾದರೂ ಸತ್ಯದ ದಾಸನು ತಾನೋರ್ವ ನೀಚ ಸೇವಕನೆಂದು ಸಮರ್ಥಿಸುವುದನ್ನು ನೀವು ಎಂದಾದರೂ ನೋಡಿದ್ದೀರಾ? ಇಸ್ಲಾಮೇತರ ವ್ಯವಸ್ಥೆಗಳ ಸ್ಥಾಪನೆಗಾಗಿ ಶ್ರಮಿಸುವ ಮುಸ್ಲಿಮರು ತಮ್ಮನ್ನು ಇಸ್ಲಾಮಿನ ವಾಹಕರೆಂದು ಚಿತ್ರಿಸಿಕೊಳ್ಳುವುದನ್ನು ನೀವು ಕಂಡಿರಬಹುದು. ಆದರೆ ಇಸ್ಲಾಮೀ ವ್ಯವಸ್ಥೆಯ ಪ್ರಚಾರಕನು ತಾನೋರ್ವ ಇಸ್ಲಾಮೇತರ ವ್ಯವಸ್ಥೆಯ ಸೇವಕನೆಂದು ಬಿಂಬಿಸಲು ಪ್ರಯತ್ನಿಸುವುದನ್ನು ನೀವು ಎಂದಾದರೂ ಕಂಡಿದ್ದೀರಾ? ಇಲ್ಲ. ಅದಕ್ಕೆ ಕಾರಣವೇನು? ಹೌದು ಜನರು ಹಿತ್ತಾಳೆಗೆ ಚಿನ್ನ ಸವರುತ್ತಾರೆ. ಆದರೆ ಚಿನ್ನಕ್ಕೆ ಯಾರೂ ಹಿತ್ತಾಳೆಯ ಒಪ್ಪ ಕೊಡುವುದಿಲ್ಲವೇಕೆ? ಕಳಪೆ ವಸ್ತುಗಳ ಮಾರಾಟಗಾರರು ಉತ್ತಮ ವಸ್ತುಗಳ ನಿರ್ಮಾಪಕರನ್ನು ಅನುಕರಿಸುತ್ತಾರೆ, ಆದರೆ ಉತ್ತಮ ವಸ್ತುಗಳನ್ನು ಮಾರುವವರು ಕಳಪೆ ವಸ್ತುಗಳವರನ್ನು ಅನುಕರಿಸುವುದಿಲ್ಲವೇಕೆ?

ಅದರ ಕಾರಣ ಸುಸ್ಪಷ್ಟ. ನಿಸರ್ಗ ನಿಯಮದಂತೆ ಮಾನವೀಯತೆಯ ಮಾರುಕಟ್ಟೆಯಲ್ಲಿ ಸತ್ಯ ಮತ್ತು ಒಳಿತಿಗೆ ಸಾಕ್ಷಾತ್ ವಿಜಯ ಲಭಿಸುವುದು. ಆದ್ದರಿಂದಲೇ ಅಸತ್ಯ ಮತ್ತು ಕೆಡುಕಿನ ಮಾರಾಟಗಾರರು ತಮ್ಮ ವಸ್ತುಗಳಿಗೆ ಸತ್ಯ ಮತ್ತು ಒಳಿತಿನ ಸೋಗು ಹಚ್ಚುತ್ತಾರೆ. ಅವರು ಸುಳ್ಳಿಗೆ ಸತ್ಯದ ಲೇಬಲ್ ಅಂಟಿಸುತ್ತಾರೆ. ನಿಕೃಷ್ಟತೆಗೆ ಉತ್ಕೃಷ್ಟತೆಯ ನಾಮಫಲಕವಿಡುತ್ತಾರೆ ಕೆಡುಕಿಗೆ ಒಳಿತಿನ ಮಾರಾಟ ಲಾಂಛನ ಹಾಕುತ್ತಾರೆ. ಸ್ವಾರ್ಥ ಹಿತಾಸಕ್ತಿಗಳಿಗೆ ಸೇವೆಯ ಹೆಸರು ಕೊಡುತ್ತಾರೆ. ಉಪಟಳಕ್ಕೆ ಉಪಕಾರದ ಮೆರುಗು ಕೊಡುತ್ತಾರೆ.

ಒಳಿತು ಮಾತ್ರ ಕೆಡುಕಿನ ಅಂಗಿ ತೊಡದೆ ತನ್ನದೇ ನಾಮದಿಂದ ಪ್ರಕಟವಾಗುತ್ತದೆ. ಆದರೆ ಕೆಡುಕು ತನ್ನ ನಾಮದ ಬದಲಾಗಿ ಸತ್ಯದ ಹೆಸರಿನಿಂದಲೇ ಸದಾ ಪ್ರಕಟವಾಗುವುದು. ತನ್ನ ರೂಪವನ್ನು ಸ್ವಲ್ಪವೂ ಬದಲಿಸದೆ'ಖೈರ್' (ಒಳಿತು) ಪ್ರತ್ಯಕ್ಷವಾಗುವುದು. 'ಶರ್‍ರ್'ನ (ಕೆಡುಕು) ವೇಷದಲ್ಲಿ ಅದೆಂದೂ ಬಾರದು. ಆದರೆ 'ಶರ್‍ರ್' ತನ್ನ ರೂಪದ ಬದಲಾಗಿ 'ಖೈರ್'ನ ರೂಪದಲ್ಲೇ ರಂಗಕ್ಕಿಳಿಯುವುದು. ಸತ್ಯವು ಎಲ್ಲ ಪರದೆಗಳನ್ನು ಸರಿಸಿ ಸುಸ್ಪಷ್ಟವಾಗಿ ಪ್ರತ್ಯಕ್ಷವಾಗುವಾಗ ಅಸತ್ಯಕ್ಕೆ ಸತ್ಯದ ಮುಖವಾಡವಿಲ್ಲದೆ ರಂಗಕ್ಕೆ ಬರಲು ಧೈರ್ಯವಿಲ್ಲ.

ಆದ್ದರಿಂದ ಸತ್ಯ ಮತ್ತು ಒಳಿತಿಗೆ ಮಾತ್ರ ನೈಜ ವಿಜಯವೆಂಬುದು ವ್ಯಕ್ತವಾಗುತ್ತದೆ. ಸತ್ಯ ಮತ್ತು ಒಳಿತಿಗೆ ಮಾತ್ರವಲ್ಲ ಅದರ ನಾಮಮಾತ್ರಕ್ಕೆ ಎಷ್ಟೊಂದು ಪ್ರಾಮುಖ್ಯತೆಯಿದೆ? ಅಸತ್ಯ ಮತ್ತು ಕೆಡುಕುಗಳಿಗೂ ಅದನ್ನು ಅವಲಂಬಿಸದೆ ಗತ್ಯಂತರವಿಲ್ಲ! ಅದನ್ನು ಅವಲಂಬಿಸದಿದ್ದರೆ ಅವು ಸಂಪೂರ್ಣವಾಗಿ ದಿವಾಳಿಯಾದಾವು. ಅಸತ್ಯ ಮತ್ತು ಕೆಡುಕುಗಳು ಸತ್ಯ ಮತ್ತು ಒಳಿತಿನ ಹೆಸರು ಹಾಗೂ ರೂಪವನ್ನು ಬಳಸುವುದೇ ಜೀವನದ ಮಾರುಕಟ್ಟೆಯಲ್ಲಿ ಸತ್ಯ ಮತ್ತು ಒಳಿತಿಗೆ ಮಾತ್ರ ಸ್ಥಾನಮಾನ ಮತ್ತು ಬೆಲೆಯಿರುವುದೆಂಬುದರ ದೃಷ್ಟಾಂತವಲ್ಲದೇ ಮತ್ತೇನು?

ಆದರೆ ಸತ್ಯದ ರೂಪದಲ್ಲಿ ತೋರಿಸಲ್ಪಡುವ ಅಸತ್ಯದಿಂದ ಹಾಗೂ ಒಳಿತಿನ ಬಿಲ್ಲೆಯಂಟಿಸಿದ ಕೆಡುಕಿನಿಂದ ಅದೆಷ್ಟೋ ಮಂದಿ ವಂಚಿತರಾಗಿದ್ದಾರೆ. ಅಂತಿದ್ದರೂ ಸತ್ಯದ ಸ್ಥಾನಮಾನ ಮತ್ತು ಒಳಿತಿನ ವಿಜಯ ಮನ್ನಣೆಗಳನ್ನು ಕುಂಠಿತಗೊಳಿಸಲು ಅವುಗಳಿಗೆ ಸಾಧ್ಯವಾಗಿಲ್ಲ. ದಿನಂಪ್ರತಿ ಸಾವಿರಾರು ಮಂದಿ ಅಂಗಡಿಯಿಂದ ಚಿನ್ನದ ಬೆಲೆ ತೆತ್ತು ಒಪ್ಪ ಹಾಕಿದ ಉಂಗುರಗಳನ್ನು ಖರೀದಿಸುತ್ತಿರುವರೆಂದು ಭಾವಿಸೋಣ. ಅದರಿಂದ ಚಿನ್ನದ ಯಶಸ್ಸು ಕಡಿಮೆಯಾಗುವುದಿಲ್ಲ. ಹಿತ್ತಾಳೆಯ ಬೆಲೆಯೂ ಹೆಚ್ಚಲಾರದು. ಯಥಾರ್ಥದಲ್ಲಿ ವಸ್ತು ಖರೀದಿಸಿದವರೇ ಸೋಲು-ಗೇಲು ಅನುಭವಿಸಬೇಕಾಗುವುದು. ಉತ್ತಮ ಹಾಗೂ ಕೆಟ್ಟ, ಅಪ್ಪಟ ಹಾಗೂ ನಕಲೀ ವಸ್ತುಗಳ ವ್ಯತ್ಯಾಸ ತಿಳಿಯುವ ಸಾಮರ್ಥ್ಯ ಮತ್ತು ಬುದ್ಧಿವಂತಿಕೆಯಿರುವವರು ಜಯಿಸುತ್ತಾರೆ. ಅಲ್ಲದವರು ಸೋಲುತ್ತಾರೆ.

## ಸತ್ಯ ಸುಸ್ಥಿರ ಮಿಥ್ಯ ಅಸ್ಥಿರ

ಸತ್ಯದ ಮೂಲ ಸಿದ್ಧಾಂತವು ಲೋಕಾರಂಭದಿಂದ ಈ ತನಕ ಒಂದೇ ಆಗಿದೆ. ತದ್ವಿರುದ್ಧವಾಗಿ ಮಿಥ್ಯವು ಈವರೆಗೂ ಬದಲಾಗದ ಯಾವ ಸಿದ್ಧಾಂತವನ್ನೂ ಪ್ರತಿಪಾದಿಸಿಲ್ಲ. ಅದು ಎಲ್ಲ ಹಂತಗಳಲ್ಲಿಯೂ ಪೊಳ್ಳು ಸಿದ್ಧಾಂತದಿಂದ ತಲೆ ಎತ್ತುತ್ತದೆ. ಹೊಸ ತತ್ವ ಸಿದ್ಧಾಂತಗಳನ್ನು ರಚಿಸುತ್ತದೆ. ಹೊಸ ದೃಷ್ಟಾಂತಗಳನ್ನು ಸಂಶೋಧಿಸುತ್ತದೆ. ಹೊಸ ವೇಷ ಧರಿಸುತ್ತದೆ. ಹೊಸ ಮೌಲ್ಯಗಳಿಂದ ರಂಗಕ್ಕೆ

ಬರುತ್ತದೆ. ಈ ರೀತಿ ಸೋತು ಸುಣ್ಣವಾಗುವವರೆಗೂ ಸತ್ಯದೊಡನೆ ಹೋರಾಡುತ್ತದೆ. ಪುನಃ ಕೆಲವು ಹೊಸ ಸಿದ್ಧಾಂತಗಳನ್ನು ಕಂಡು ಹಿಡಿಯುತ್ತದೆ. ನವೀನ ತತ್ವ ಶಾಸ್ತ್ರಗಳನ್ನು ರಚಿಸುತ್ತದೆ. ಪೊಳ್ಳು ನ್ಯಾಯ ಮತ್ತು ಸಮರ್ಥನೆಗಳನ್ನು ಹುಡುಕುತ್ತದೆ. ಹೀಗೆ ಹೊಸ ಸನ್ನಾಹದೊಂದಿಗೆ ದ್ವಿತೀಯ ಬಾರಿ ಆಕ್ರಮಣ ಪ್ರಾರಂಭಿಸುತ್ತದೆ. ಈ ಬಾರಿಯೂ ಸೋತು ರಣರಂಗದಿಂದ ಹಿಮ್ಮೆಟ್ಟುವಾಗ, ಹೊಸ ರೂಪ ತಾಳಿ ಪುನಃ ಪ್ರತ್ಯಕ್ಷವಾಗುತ್ತದೆ. ಮಿಥ್ಯದ ತತ್ವ ಸ್ಥಿರವಲ್ಲ. ಅದರ ವರ್ಣವೂ ಸ್ಥಿರವಲ್ಲ. ಅದರ ಶಾಸ್ತ್ರವೂ ಶಾಶ್ವತವಲ್ಲ. ಅದರ ದೃಷ್ಟಾಂತವೂ ನಿಶ್ಚಲವಲ್ಲ.

ಆದರೆ ಸತ್ಯ ಸ್ಥಿತಿ ಹಾಗಲ್ಲ. ಅದಕ್ಕೆ ಸದಾಕಾಲವೂ ಒಂದೇ ಸಿದ್ಧಾಂತವಿದೆ. ಅದು ಒಂದೇ ತತ್ವ ಶಾಸ್ತ್ರವನ್ನು ಪ್ರತಿಪಾದಿಸುತ್ತದೆ. ಒಂದೇ ದೃಷ್ಟಾಂತವಿದೆ. ಅದರ ರೂಪವೂ ಒಂದೇ ಆಗಿರುವುದು. ಮಿಥ್ಯದ ಸರ್ವ ಆಕ್ರಮಣಗಳನ್ನು ಸದಾ ಒಂದೇ ಆಯುಧದಿಂದ ಎದುರಿಸಿ ಅಜೇಯವಾಗುವುದು. ಸತ್ಯದ ಪ್ರತಿಷ್ಠೆಗೆದುರಾಗಿ ಸಾವಿರಗಟ್ಟಲೆ ಸಂಸ್ಥೆಗಳು ಹುಟ್ಟಿ ಸಾಯುತ್ತಿವೆ. ಪುನಃ ಸ್ಥಾಪಿಸಲ್ಪಡುತ್ತವೆ. ಆದರೆ ಸತ್ಯ ವ್ಯವಸ್ಥೆಯು ಪೂರ್ವ ಸ್ಥಿತಿಯಲ್ಲಿಯೇ ಸುಭದ್ರವಾಗಿರುವುದು.

ದೇವನು ಏಕನೆಂದು 'ಸತ್ಯ'ವು ಹೇಳಿತು. ಆದರೆ ಅದಕ್ಕೆ ವ್ಯತಿರಿಕ್ತವಾಗಿ 'ಮಿಥ್ಯ'ವು ಒಮ್ಮೆ ದೇವದ್ವಯ ಸಿದ್ಧಾಂತವನ್ನೂ ಇನ್ನೊಮ್ಮೆ ಬಹುದೇವ ಸಿದ್ಧಾಂತವನ್ನೂ ಮತ್ತೊಮ್ಮೆ ಅದ್ವೈತ ಸಿದ್ಧಾಂತವನ್ನೂ ಮಗದೊಮ್ಮೆ ನಾಸ್ತಿಕತೆಯನ್ನೂ ಅನಂತರ 'ಅಜ್ಞಾನ ಶಕ್ತಿ'ಯ ದಿವ್ಯ ಸಿದ್ಧಾಂತವನ್ನೂ ಎತ್ತಿ ತೋರಿಸಿತು. ಪ್ರಾಮಾಣಿಕತೆ, ವಚನ ಪಾಲನೆ, ಸತ್ಯನಿಷ್ಠೆ, ಸಹೋದರತೆ, ಸಹಾನುಭೂತಿ, ಹಕ್ಕುಗಳ ಗೌರವ, ಮಾನವೀಯ ಗೌರವ ರಕ್ಷಣೆ ಇತ್ಯಾದಿಗಳು ಸದಾಚಾರದ ಮೂಲ ಸಿದ್ಧಾಂತಗಳೆಂದು 'ಸತ್ಯ'ವು ವಾದಿಸಿತು. ತದ್ವಿರುದ್ಧವಾಗಿ 'ಮಿಥ್ಯ'ವು ನಾನಾ ವಿಧದ ಸದಾಚಾರ ಸಿದ್ಧಾಂತಗಳನ್ನು ರೂಪಿಸಿತು. ಆದರೆ 'ಸತ್ಯ'ವು ತನ್ನ ಹಳೆಯ ಸಿದ್ಧಾಂತವನ್ನೇ ಪ್ರಚಾರ ಮಾಡುತ್ತಿದೆ. ಇಂದಿಗೂ ಆ ತತ್ವಗಳೇ ಮಾನವ ಪ್ರಕೃತಿಗೆ ಅತ್ಯಂತ ಸೂಕ್ತವಾಗಿದೆ.

ಶಾಶ್ವತ ಹಾಗೂ ಸುಸ್ಥಿರವಾದ ಯಾವೊಂದು ಸಿದ್ಧಾಂತವನ್ನೂ ಮಾನವಕುಲಕ್ಕೆ ಸಮರ್ಪಿಸಲು 'ಮಿಥ್ಯ'ಕ್ಕೆ ಈ ತನಕ ಸಾಧ್ಯವಾಗಿಲ್ಲ. ಹೀಗಿರುತ್ತಾ ಅದರ ಸೋಲಿಗೆ

ಇದಕ್ಕಿಂತ ಹೆಚ್ಚಿನ ದೃಷ್ಟಾಂತ ಬೇರೇನು ಬೇಕು? ತನ್ನ ಒಂದೇ ಒಂದು ವಾದವನ್ನಾದರೂ ಮಾನವ ಬುದ್ಧಿಯು ಒಪ್ಪುವಂತೆ ಮಾಡಲು ಅದಕ್ಕೆ ಸಾಧ್ಯವಾಗಿಲ್ಲ. ಇಂದು ಮುಂದಿಟ್ಟಿದನ್ನು ನಾಳೆ ಸ್ವಯಂ ನಿರಾಕರಿಸುವುದು. ಇಂದು ರಚಿಸಿದ ಸಿದ್ಧಾಂತಗಳನ್ನು ನಾಳೆ ಸ್ವಕರಗಳಿಂದಲೇ ಕಿತ್ತೆಸೆಯುವುದು. ಇಂದೊಂದು ಚಳವಳಿಯನ್ನಾರಂಭಿಸಿದರೆ ನಾಳೆ ಅದರ ನಾಮಾವಶೇಷವಿಲ್ಲದಂತೆ ನಿರ್ಲಕ್ಷಿಸುವುದು. ಇಂದು ನಿರ್ಧರಿಸಿದ ವ್ಯವಸ್ಥೆಯನ್ನು ನಾಳೆ ವಿಫಲವೆಂದು ಕಸದ ಬುಟ್ಟಿಗೆ ಹಾಕುವುದು. ಸ್ವಕರಗಳಿಂದಲೇ ಬರೆದ ಚಿತ್ರದ ಮುಖಕ್ಕೆ ಉಗುಳುವ ಕಲೆಗಾರನಂತೆ ಮಿಥ್ಯವು ಅಪ್ರಬುದ್ಧ ಕಲೆಗಾರ, ಆದರೆ ಸತ್ಯವೆಂಬ ಕಲೆಗಾರನು ಅರ್ಪಿಸುವ ಕಲೆಯ ಮಾದರಿಯು ಮಾನವೇತಿಹಾಸದ ಪ್ರದರ್ಶನಾಲಯದಲ್ಲಿ ಸದಾ ಚಿತ್ತಾಕರ್ಷಕವಾಗಿ ಮೆರೆಯುವುದು.

ಆದರೆ ಬಹಳ ನಾಜೂಕು ಮತ್ತು ತ್ರಾಸದಾಯಕವಾದ ಸತ್ಯದ ಕಲೆಗೆ ಕಲೆಗಾರರು ವಿರಳವಾಗಿ ದೊರೆಯುತ್ತಾರೆ. ಮಿಥ್ಯದ ಸರಳ ಹಾಗೂ ಸ್ಥೂಲ ಕಲೆಗೆ ಅನೇಕ ಮಂದಿ ಕಲಾಕಾರರು ದೊರೆಯುತ್ತಾರೆಂಬ ಕಾರಣದಿಂದ ಸುಂದರ ಕಲೆಯ ಸ್ಥಾನಮಾನವೆಂದೂ ಕಡಿಮೆಯಾಗುವುದಿಲ್ಲ. ಕುರೂಪಿ ಕಲೆಯ ಬೆಲೆ ಹೆಚ್ಚುವುದೂ ಇಲ್ಲ. ಶಾಶ್ವತ ಮೌಲ್ಯವಿರುವ ಕಲೆಯ ಅಣುಗಾತ್ರವು ಮಿಥ್ಯ ಕಲೆಗಾರರ ಬೃಹತ್ ಸೇನಾ ಪಡೆಯನ್ನೇ ಸೋಲಿಸಲು ಶಕ್ತವಾಗಿದೆ.

## ಸತ್ಯ ಸ್ವಾವಲಂಬಿ, ಮಿಥ್ಯ ಪರಾವಲಂಬಿ

ಗದ್ದೆ ಉತ್ತು ನೀರು ಹಾಯಿಸಿ ಅದರಲ್ಲಿ ಮುಳ್ಳುಗಂಟಿಗಳನ್ನೂ ಪೊದೆಗಳನ್ನೂ ನೆಟ್ಟು ಬೆಳೆಸುವುದನ್ನು ನೀವು ನೋಡಿರಲಾರಿರಿ. ಆದರೆ ನಾವು ಉತ್ತಮ ಬೆಳೆಗಳ ಕೃಷಿ ಮಾಡಿದಾಗ ಫಲವತ್ತಾದ ಆ ಜಮೀನಿನ ದುರ್ಲಾಭ ಪಡೆದು ಕೆಲವು ಕಳೆ ಗಿಡಗಳು ಬೆಳೆಯುತ್ತದೆ. ಶ್ರಮಜೀವಿಯಾದ ರೈತನು ಅನಾವಶ್ಯಕ ಕಳೆಗಳೆಲ್ಲವನ್ನೂ ಕಿತ್ತೆಸೆದು ಶುಚಿಗೊಳಿಸುತ್ತಾನೆ. ಆದರೂ ಕಳೆ ಗಿಡಗಳು ಆತನ ಕಣ್ಣಿಗೆ ಕಾಣಿಸದೇ ಪೈರಿನಡಿಯಲ್ಲಿ ಉಳಿದು ಅದರ ಗೊಬ್ಬರವನ್ನು ಹೀರಿ ಬೆಳೆಯುತ್ತವೆ. ಅದೇ ರೀತಿ ಬಂದಣಿಕೆಯು ಎಲ್ಲಿಯೂ ಸ್ವತಂತ್ರವಾಗಿ ಬೆಳೆಯುವುದನ್ನು ನೀವು

ಕಂಡಿರಲಾರಿರಿ. ಅದಕ್ಕೆ ಬೇರಿಲ್ಲ. ನೇರವಾಗಿ ಅದಕ್ಕೆ ಆಹಾರ ನೀಡಲು ಭೂಮಿಯೂ ತಯಾರಿಲ್ಲ. ಆದ್ದರಿಂದ ಬಂದಣಿಕೆಗಳು ಇತರ ಮರಗಿಡಗಳಿಗಂಟಿ ಕೊಂಡು ಮಾತ್ರ ಬೆಳೆಯುವುದನ್ನು ನೀವು ಕಾಣುತ್ತೀರಿ.

ಸತ್ಯ-ಮಿಥ್ಯಗಳ ಸ್ಥಿತಿಯೂ ಅದೇ ಆಗಿದೆ. ಮಿಥ್ಯವು ಸತ್ಯಕ್ಕಂಟಿಯೇ ಕಾಣ ಸಿಗುವುದು. ಮಿಥ್ಯಕ್ಕೆ ಲೋಕದಲ್ಲಿ ಪ್ರತ್ಯೇಕ ಅಸ್ತಿತ್ವವಿಲ್ಲ. ಅದು ಸತ್ಯದ ಮರೆ ಯಲ್ಲಿಯೇ ಮಾನವ ಸಹಜ ಗದ್ದೆಯಲ್ಲಿ ಕೆಲವೊಮ್ಮೆ ಬೆಳೆಯುವುದು. ಅದು ಸತ್ಯದ ಆಹಾರವನ್ನು ತಿಂದು ಬೆಳೆಯುವುದು. ಅದಕ್ಕೆ ಬಂದಣಿಕೆಯಂತೆ ಇತರ ಮರ ಗಿಡಗಳ ಮೇಲೆ ಹುಟ್ಟಿ ಬೆಳೆದು ಹೂ-ಹಣ್ಣು ನೀಡುವ ಸ್ವಭಾವವಿದೆ.

ಲೋಕದಲ್ಲಿ ಒಳಿತಿನ ಮರೆಯಲ್ಲಿಯೇ ಪ್ರತಿಯೊಂದು ಕೆಡುಕು ಬದುಕುವುದು. ಎಲ್ಲ ತಪ್ಪುಗಳಿಗೂ ಒಂದು ಸತ್ಯದ ತೆರೆಮರೆ ಬೇಕಾಗುವುದು. ಈ ತನಕ ಲೋಕದಲ್ಲಿ ಪ್ರತಿಪಾದಿಸಿ ಸ್ಥಾಪಿಸಲ್ಪಟ್ಟ ಯಾವುದೇ ನಿಷಿದ್ಧ ವ್ಯವಸ್ಥೆಯೂ ಕೇವಲ ಅಪ್ಪಟ ಮಿಥ್ಯ ಮತ್ತು ಕೆಡುಕುಗಳು ಸೇರಿಕೊಂಡುದಾಗಿರಲಿಲ್ಲ. ಮಿಥ್ಯ ವ್ಯವಸ್ಥೆಗಳಲ್ಲಿ ಸಾಮಾನ್ಯವಾಗಿ ಸೇರಿಕೊಳ್ಳುವ ಕೆಲವು ಸತ್ಯಾಂಶಗಳಿಂದಾಗಿಯೇ ಕೆಡುಕು ಮತ್ತು ನಿಷಿದ್ಧಗಳು ಕೆಲವೊಮ್ಮೆ ಚಲಾವಣೆಗೊಂಡಿವೆ. ನಿಷಿದ್ಧಗಳು ನೂರಂಶ ನಿಷಿದ್ಧವಾಗಿರದೆ ಸತ್ಯ-ಮಿಥ್ಯಗಳ ಮಿಶ್ರಣ ರೂಪದಲ್ಲಿ ರಂಗಕ್ಕೆ ಬರುತ್ತವೆ. ಅದರ ಖ್ಯಾತಿ, ಆಯುಸ್ಸು, ಪ್ರಾಬಲ್ಯ ಮತ್ತು ಪ್ರಾಪ್ತಿಗಳೆಲ್ಲವೂ ಅದರಲ್ಲಡಕ ವಾಗಿರುವ ಸತ್ಯಾಂಶವನ್ನು ಅವಲಂಬಿಸಿರುತ್ತದೆ. ಭಂಡವಾಳಶಾಹಿತ್ವದಲ್ಲಿ ಮಿಥ್ಯ ಸೇರಿಕೊಂಡಿದೆ; ಕಮ್ಯೂನಿಸ್ಟ್ ವ್ಯವಸ್ಥೆಯಲ್ಲಿ ಮಿಥ್ಯದ ಅತೀದೊಡ್ಡ ಅಂಶವಿದೆ. ಆದರೆ ಸತ್ಯದ ಕೆಲ ಅಂಶಗಳು ಅವೆರಡರಲ್ಲಿಯೂ ಇವೆ. ಆ ಸತ್ಯಾಂಶಗಳನ್ನವ ಲಂಬಿಸಿಯೇ ಅವುಗಳ ಮಿಥ್ಯವು ಜೀವಿಸುತ್ತದೆ! ಅವೆರಡರಲ್ಲಿಯೂ ಮಾನವೀಯತೆಗೆ ಹೊಂದುವ ಹಾಗೂ ಮಾನವನ ಸಹಜತೆಯನ್ನು ಆಕರ್ಷಿಸುವ ಕೆಲವು ಒಳಿತುಗಳಿವೆ. ಆ ಭಾಗವನ್ನು ಎತ್ತಿ ತೋರಿಸುತ್ತಾ ಅವು ತಮ್ಮೆಡೆಗೆ ಜನರನ್ನು ಆಕರ್ಷಿಸುತ್ತವೆ. ಪ್ರಸ್ತುತ ಒಳಿತಿನ ಹೆಸರಿನಲ್ಲಿಯೇ ಜನರು ಅವುಗಳನ್ನು ಸ್ವೀಕರಿಸುತ್ತಾರೆ. ಆದರೆ ಅವುಗಳ ಕೆಡುಕುಗಳು ಬಂದಣಿಕೆಯಂತೆ ಆ ಒಳಿತುಗಳ ಮೇಲೆ ಅಂಟಿಕೊಂಡಿವೆ. ಆದ್ದರಿಂದ ಅದರ ಒಳಿತುಗಳನ್ನು ಸ್ವೀಕರಿಸಿದಾಗ ಅದರ ಕೆಡುಕುಗಳೂ ಸ್ವಯಂ ಅಂಟಿಕೊಳ್ಳುತ್ತವೆ.

ರವಷ್ಟಾದರೂ ಸತ್ಯ ಬೆರೆತಿರದ ಮಿಥ್ಯಕ್ಕೆ ಅಸ್ತಿತ್ವ ಅಸಾಧ್ಯ. ಅಚ್ಚ ನಿಷಿದ್ಧಕ್ಕೆ ಲೋಕದಲ್ಲಿ ಎಳ್ಳಷ್ಟೂ ಸ್ಥಾನವಿಲ್ಲ.

ಈ ದೃಷ್ಟಿಕೋನದಿಂದ ಇತಿಹಾಸವನ್ನು ಅವಲೋಕಿಸಿದರೆ ಎಲ್ಲ ನೀಚ ವ್ಯವಸ್ಥೆಗಳ ಅಸ್ತಿತ್ವವು ಅವುಗಳಲ್ಲಿರುವ ಸತ್ಯಾಂಶವನ್ನು ಅವಲಂಬಿಸಿರುವುದು ಕಂಡು ಬರುತ್ತದೆ. ತನ್ನಿಮಿತ್ತ ಅವುಗಳ ವಿಜಯವು ವಾಸ್ತವದಲ್ಲಿ ಸತ್ಯದ ವಿಜಯವೆಂದು ವ್ಯಕ್ತವಾಗುವುದು ಹಾಗೂ ಯಾವುದೇ ತತ್ವ ಸಿದ್ಧಾಂತ ಮತ್ತು ವ್ಯವಸ್ಥೆ ಮನ್ನಣೆ ಗಳಿಸಿ ಸ್ಥಾಪಿಸಲ್ಪಡುವುದಕ್ಕೆ ಅದರಲ್ಲಿರುವ ಸತ್ಯಾಂಶವೇ ಕಾರಣವೆಂಬುದು ದಿಟ.

## ಸತ್ಯ-ಮಿಥ್ಯ ಮಿಶ್ರಣಗಳ ಸಂಘರ್ಷ

ಇತಿಹಾಸವು ಸಿದ್ಧಾಂತ, ತತ್ವಶಾಸ್ತ್ರ ಮತ್ತು ವ್ಯವಸ್ಥೆಗಳ ರಣರಂಗವಾಗಿದೆ. ಆದರೆ ಆ ಸಂಘರ್ಷಗಳ ಫಲಿತಾಂಶಗಳಿಗೆ ಹೇತುವಾದ ತತ್ವಗಳು ಸತ್ಯವು ವಿಜಯಿ ಮತ್ತು ಮಿಥ್ಯವು ಪರಾಜಿತವೆಂದು ಸಾಕ್ಷ್ಯ ವಹಿಸುತ್ತವೆ.

ಅಪ್ಪಟ ನಿಷಿದ್ಧಕ್ಕೆ ಮಾನವ ಲೋಕದಲ್ಲಿ ಸ್ಥಾನವಿಲ್ಲ. ಇಲ್ಲಿ ಸತ್ಯ-ಮಿಥ್ಯಗಳ ಮಿಶ್ರಣ ಗೋಚರಿಸುತ್ತದೆ. ಅವು ಇಲ್ಲಿ ಪರಸ್ಪರ ಸಂಘರ್ಷಿಸುತ್ತವೆ. ಪ್ರಸ್ತುತ ಸಂಘರ್ಷದಲ್ಲಿ ಸತ್ಯಾಂಶಗಳು ಅಧಿಕವಿರುವ ಹಾಗೂ ಮಿಥ್ಯಾಂಶಗಳು ಕಡಿಮೆ ಇರುವ ಸಿದ್ಧಾಂತಗಳು, ತತ್ವಶಾಸ್ತ್ರಗಳು, ವ್ಯವಸ್ಥೆಗಳು ಸಾಮಾನ್ಯವಾಗಿ ಜಯ ಗಳಿಸುತ್ತವೆ. ಶೇಕಡಾ 5 ಮತ್ತು ಶೇಕಡಾ 10 ಸತ್ಯಾಂಶ ಹೊಂದಿರುವ ಎರಡು ವ್ಯವಸ್ಥೆಗಳು ಪರಸ್ಪರ ಸಂಘರ್ಷಿಸಿದರೆ 10% ಸತ್ಯಾಂಶವಿರುವ ವ್ಯವಸ್ಥೆ ಜಯ ಗಳಿಸುವುದು ಖಚಿತ.

"ಅಲ್ಲಾಹನು ಜನರಲ್ಲಿ ಕೆಲವರನ್ನು ಕೆಲವರಿಂದ ತಡೆಯದಿರುತ್ತಿದ್ದರೆ ಭೂಮಿಯಲ್ಲಿ ಗೊಂದಲವುಂಟಾಗುತ್ತಿತ್ತು" ಎಂಬ ಕುರ್‌ಆನ್ ವಾಕ್ಯದಂತೆ ಇಲ್ಲಿ ನಡೆಯುತ್ತಿರುವ ಹೋರಾಟ ಮತ್ತು ಜಯಾಪಜಯಗಳೆಲ್ಲವೂ ಅದೇ ಬುನಾದಿಯಲ್ಲಿ ಜರಗುತ್ತಿವೆ.

ಆದರೆ ಸತ್ಯವನ್ನು ಎದುರಿಸುವ ಎಲ್ಲ ಸತ್ಯ-ಮಿಥ್ಯ ಮಿಶ್ರಣಗಳಿಗೂ

ಅಂತಿಮವಾಗಿ ಸೋಲು ಅನಿವಾರ್ಯವೆಂದು ಸಂಘರ್ಷ ತತ್ವಶಾಸ್ತ್ರದ ಬಗ್ಗೆ ಕುರ್‌ಆನ್ ಪ್ರತಿಪಾದಿಸುತ್ತದೆ.

ಅಪ್ಪಟ ಸತ್ಯದೊಂದಿಗೆ ಎದ್ದೇಳುವ ಒಂದು ಜನ ವಿಭಾಗವು ಅದಕ್ಕಾಗಿ ಸೂಕ್ತ ರೀತಿಯಲ್ಲಿ ಪ್ರಯತ್ನಿಸಿದರೆ ಅವರಿಗೆ ಅಂತಿಮ ವಿಜಯವು ಶತಸಿದ್ಧವೆಂಬ ಪರಮ ಸತ್ಯವನ್ನು ಈ ಲೇಖನದ ಆರಂಭದಲ್ಲಿ ಉದ್ಧರಿಸಿರುವ ಕುರ್‌ಆನ್ ಸೂಕ್ತದಲ್ಲಿ ವಿವರಿಸಲಾಗಿದೆ, ಅಂತಿಮ ವಿಜಯವು ಸತ್ಯವಂತರಿಗಿರುವುದು.

## ನೈಜ ಸತ್ಯವಾಹಕರ ಸಂಖ್ಯೆ ಕಡಿಮೆಯೇಕೆ?

ಸತ್ಯವು ಮಾನವ ಗುಣಕ್ಕೆ ಯೋಗ್ಯವಾಗಿದೆ. ಪ್ರಪಂಚ ವ್ಯವಸ್ಥೆಯು ಸಂಪೂರ್ಣವಾಗಿ ಅನುಕೂಲವಾಗಿದೆ. ಅದಕ್ಕೆ ನೈಜ ಹಾಗೂ ಶಾಶ್ವತ ವಿಜಯ ವಿಧಿಸಲ್ಪಟ್ಟಿದೆ. ಹಾಗಾದರೆ ಸತ್ಯವಾಹಕರ ಸಂಖ್ಯೆ ಕಡಿಮೆಯಾಗಲು ಕಾರಣವೇನು? ಇದು ಹಲವು ಬಾರಿ ಪುನರಾವರ್ತನೆಯಾಗುತ್ತಿರುವ ಪ್ರಶ್ನೆ. ಅದಕ್ಕೆ ಉತ್ತರಿಸಿದ್ದರೂ, ಇನ್ನೊಮ್ಮೆ ಅದನ್ನು ವಿವರಿಸುತ್ತೇನೆ.

ಶುಚಿತ್ವವು ಮಾನವ ಸಹಜ ಗುಣಕ್ಕೆ ಯೋಗ್ಯ ಹಾಗೂ ಉಪಯುಕ್ತವಷ್ಟೆ, ಆದರೂ ಶುಚಿತ್ವದ ಅಭ್ಯಾಸವನ್ನು ಪಾಲಿಸುವವರು ವಿರಳ. ಶುಚಿತ್ವ ಮತ್ತು ಶುಭ್ರತೆಯ ತೆರೆಮರೆಯಲ್ಲಿ ಹಲವು ವಿಧದ ಮಾಲಿನ್ಯಗಳನ್ನು ಅಡಗಿಸುವವರು ಧಾರಾಳವಾಗಿದ್ದಾರೆ. ಆರೋಗ್ಯವು ಎಲ್ಲರಿಗೂ ಅಪೇಕ್ಷಣೀಯ, ರೋಗ ಯಾರಿಗೂ ಬೇಡ. ಆದರೂ ಆರೋಗ್ಯ ನಿಯಮಗಳನ್ನು ನಿಷ್ಠೆಯಿಂದ ಪಾಲಿಸಿ ರೋಗ ನಿರೋಧಕ ಕ್ರಮಗಳನ್ನು ಸ್ವೀಕರಿಸುವವರು ತೀರಾ ಕಡಿಮೆ. ಸತ್ಯ ಸ್ವೀಕಾರದ ಅವಸ್ಥೆಯೂ ಅದಕ್ಕಿಂತ ಭಿನ್ನವಲ್ಲ.

ಒಂದೆಡೆ ಮಾನವನಲ್ಲಿ ಒಳಿತು ಮತ್ತು ಯಶಸ್ಸಿನ ಅಭಿಲಾಷೆಯೂ ಇನ್ನೊಂದೆಡೆ ಸುಖ ಮತ್ತು ವಿಶ್ರಾಂತಿಯ ವಾಂಛೆಯೂ ಕ್ರಿಯಾಶೀಲವಾಗಿರುತ್ತದೆ. ಒಳಿತು ಮತ್ತು ಯಶಸ್ಸಿಗಾಗಿ ಶ್ರಮವಹಿಸಬೇಕಾಗುವುದು. ಪರಿಶ್ರಮಕ್ಕೆ ವಿಶ್ರಾಂತಿಯ ಬಯಕೆಯು ಅಡ್ಡಿಯಾಗುತ್ತದೆ. ತನ್ನಿಮಿತ್ತ ಇಚ್ಛೆಗಳ ಪರಸ್ಪರ ತಾಕಲಾಟದಿಂದ ಮಾನವನು ವಿಸ್ಮಯಕಾರೀ ಸ್ಥಿತ್ಯಂತರಗಳಲ್ಲಿ ಸಿಲುಕುತ್ತಾನೆ. ಕೆಲವೊಮ್ಮೆ ಕೈಗೆಟಕುವ

ತುಚ್ಛಲಾಭಕ್ಕೆ ಭವಿಷ್ಯದ ಭಾರೀ ಲಾಭವನ್ನು ಕಡೆಗಣಿಸುತ್ತಾನೆ. ತಾತ್ಕಾಲಿಕ ಸಂಕಷ್ಟಗಳಿಂದ ಪಾರಾಗಲಿಕ್ಕಾಗಿ ಬರಲಿರುವ ಮಹಾ ವಿಪತ್ತುಗಳನ್ನು ಸಹಿಸಲು ಸನ್ನದ್ಧನಾಗುತ್ತಾನೆ. ಆತನು ಹೆಚ್ಚು ದುಡಿದು ಹೆಚ್ಚು ಸಂಪಾದಿಸುವುದಕ್ಕಿಂತ ಕಡಿಮೆ ದುಡಿದು ಕಡಿಮೆ ಸಂಪಾದಿಸುವುದನ್ನು ಇಷ್ಟಪಡುತ್ತಾನೆ.

ಸ್ವಾಭಾವಿಕವಾಗಿ ಮಾನವನು ಸತ್ಯ ಅಥವಾ ಮಿಥ್ಯವನ್ನು ಸ್ವೀಕರಿಸಲು ನಿರ್ಬಂಧಿತನಾಗಿಲ್ಲ. ಎರಡರಲ್ಲೊಂದನ್ನು ಆಯ್ದುಕೊಳ್ಳುವ ಸ್ವಾತಂತ್ರ್ಯ ಆತನಿಗೆ ನೀಡಲ್ಪಟ್ಟಿದೆ. ತನ್ನಿಮಿತ್ತ ಸತ್ಯವೆಂಬ ಅಮೂಲ್ಯ ಸಂಪತ್ತಿನ ಗಳಿಕೆಗಾಗಿ ದುಬಾರಿ ತ್ಯಾಗ ಪರಿಶ್ರಮಗಳ ಬೆಲೆ ತೆರುವ ಧೈರ್ಯಶಾಲಿಗಳ ಸಂಖ್ಯೆ ತೀರಾ ವಿರಳವಾಗಿದೆ. ಸುಲಭ ಪರಿಶ್ರಮಗಳ ಚಿಕ್ಕಾಸಿನಿಂದ ಅಗ್ಗದಲ್ಲಿ ದೊರೆಯುವ ಸತ್ಯಾಸತ್ಯಗಳ ಕಲಬೆರೆಕೆಯನ್ನು ಖರೀದಿಸುವವರೇ ಅಧಿಕ. ಸಾಮಾನ್ಯವಾಗಿ ಅಗ್ಗದ ವಸ್ತುವಿಗೆ ಹೆಚ್ಚು ಗ್ರಾಹಕರಿರುತ್ತಾರಷ್ಟೆ.

ಸತ್ಯ ಮತ್ತು ಮಿಥ್ಯಗಳ ಪೈಕಿ ಯಾವುದಾದರೊಂದನ್ನು ಆಯ್ದುಕೊಂಡು ಸಂಪೂರ್ಣ ಜೀವನವನ್ನು ಅದರ ಸೇವೆಗಾಗಿ ಮುಡಿಪಾಗಿಡಲು ಮನುಷ್ಯನು ಸ್ವತಂತ್ರನಾಗಿದ್ದಾನೆ. ಈ ಸ್ವಾತಂತ್ರ್ಯದ ಮರೆಯಲ್ಲಿ ಹಲವು ಜನರು ಸತ್ಯವನ್ನು ಅವಗಣಿಸುವುದರಲ್ಲಿ ಅಚ್ಚರಿಯಿಲ್ಲ. ತರುವಾಯ ಅವರು ತಪ್ಪು ಸಿದ್ಧಾಂತಗಳ ಹಾಗೂ ನೀಚ ವ್ಯವಸ್ಥೆಗಳ ವಾಹಕರಾಗುತ್ತಾರೆ. ಅವುಗಳನ್ನು ಪ್ರಚಾರ ಮಾಡುತ್ತಾರೆ. ಅವುಗಳಿಗಾಗಿ ಸಂಘಟಿಸಿ, ಸಾಧನ ಸವಲತ್ತುಗಳನ್ನು ಸಂಗ್ರಹಿಸಿ, ಸಾಹಿತ್ಯಗಳನ್ನೂ, ಶೈಕ್ಷಣಿಕ ಪದ್ಧತಿಗಳನ್ನೂ ರಚಿಸಿ, ಜಗತ್ತು ಅವುಗಳ ಮುಂದೆ ತಲೆಬಾಗುವಂತೆ ತೀವ್ರ ಪ್ರಯತ್ನ ನಡೆಸುತ್ತಾರೆ. ಈ ರೀತಿ ಅವುಗಳಿಗೆ ಜಗತ್ತಿನಲ್ಲಿ ವ್ಯಾಪಕ ಯಶಸ್ಸು ದೊರೆತು, ಇತಿಹಾಸದ ದೀರ್ಘಾವಧಿಯನ್ನು ಅವು ಆಕ್ರಮಿಸುತ್ತವೆ.

ಅಂತಹ ಕಾಲಘಟ್ಟದಲ್ಲಿಯೇ ನಾವಿಂದು ಸಾಗುತ್ತಿದ್ದೇವೆ. ಈ ಕಾಲದಲ್ಲಿ ತಾಂಡವವಾಡುತ್ತಿರುವ ಮಿಥ್ಯವನ್ನು ನೋಡಿ ಹಲವರು ದಿಗ್ಭ್ರಾಂತರಾಗಿ ಸತ್ಯದ ವಿಜಯ ಸಾಧ್ಯತೆಯ ಬಗ್ಗೆ ನಿರಾಶರಾಗುತ್ತಾರೆ. ಆದರೆ ಯಥಾರ್ಥದಲ್ಲಿ ಸತ್ಯದ ವಿಜಯಕ್ಕೆ ಪೂರ್ಣಾವಕಾಶವಿದೆಯೆಂಬುದೇ ದಿಟ.

ಮಿಥ್ಯದ ಯಶಸ್ಸಿಗಾಗಿ ಅದರ ಅನೇಕ ವಾಹಕರು ಮಾಡುವ ಕೆಲಸವನ್ನು ನಿರ್ವಹಿಸಲು ಬೆರಳೆಣಿಕೆಯ ಸತ್ಯವಾಹಕರು ಸಾಕು. ಉನ್ನತ ಮಟ್ಟದ ಸತ್ಯವಾದಿಗಳ

ಒಂದು ಕಿರು ತಂಡಕ್ಕೆ ಜನರ ನಾಯಕತ್ವವನ್ನು ವಶಪಡಿಸಲು ಸಾಧ್ಯವಿದೆ. ಮಿಥ್ಯವಾದಿಗಳ ಹೆಚ್ಚಳ ಹಾಗೂ ಸತ್ಯವಾದಿಗಳ ಕೊರತೆಯ ಪರಸ್ಪರ ಅಂತರವು ಸತ್ಯವಾಹಕರ ಪ್ರಸ್ತುತ ಶ್ರೇಷ್ಟ ಗುಣಗಳಿಂದ ಸಂಪೂರ್ಣವಾಗಿ ಭರ್ತಿಯಾಗುವುದು.

## ಕೇವಲ ಮೂವತ್ತು ವರುಷವೇ?

ಇನ್ನು ಎರಡನೇ ಪ್ರಶ್ನೆಯ ಕುರಿತು ಆಲೋಚಿಸೋಣ. ಇಸ್ಲಾಮಿನ ಸತ್ಯ ವ್ಯವಸ್ಥೆಯು ಹೆಚ್ಚು ಕಾಲ ಉಳಿಯಲಿಲ್ಲವೇಕೆ? ಯಾವುದಾದರೊಂದು ವ್ಯವಸ್ಥೆಗೆ ಹೆಚ್ಚು ಕಾಲ ಉಳಿಯುವ ಯೋಗ್ಯತೆಯಿಲ್ಲವೆಂದಾದರೆ ಅದಕ್ಕಾಗಿ ಕಠಿಣ ತ್ಯಾಗ ಪರಿಶ್ರಮವನ್ನು ಸಹಿಸುವ ಬದಲಾಗಿ ಬೇರೊಂದು ವ್ಯವಸ್ಥೆಯನ್ನು ಯಾಕೆ ಸ್ವೀಕರಿಸಬಾರದು? ಎಂಬೀ ಪ್ರಶ್ನೆಗಳು ಇದರಲ್ಲಿ ಅಡಕವಾಗಿವೆ. ಅದಕ್ಕೆ ಉತ್ತರ ಹುಡುಕುವಾಗ ಕೆಲವು ವಿಷಯಗಳನ್ನು ವಿವರಿಸಿ ಹೇಳಬೇಕಾಗುತ್ತದೆ. ಅವುಗಳನ್ನು ಸಂಕ್ಷಿಪ್ತವಾಗಿ ಇಲ್ಲಿ ವಿವರಿಸುತ್ತೇನೆ.

### ವಿವರಣೆಗಳು:

(1) ಯಾವುದಾದರೊಂದು ವ್ಯವಸ್ಥೆ ಅಥವಾ ಸಿದ್ಧಾಂತವನ್ನು ಅಂಗೀಕರಿಸಿ, ಅದರ ಸಾಧನೆಗಾಗಿ ತ್ಯಾಗ ಪರಿಶ್ರಮಗಳಲ್ಲಿ ಭಾಗವಹಿಸುವುದಕ್ಕಿಂತ ಮುಂಚಿತವಾಗಿ, ಅದು ಹಿಂದೊಮ್ಮೆ ಹೆಚ್ಚು ಕಾಲ ಜಾರಿಯಲ್ಲಿತ್ತೆಂದು ಸಾಬೀತಾಗಬೇಕಾದರೆ, ಅಥವಾ ಹಾಗೆ ಸಾಬೀತುಪಡಿಸುವುದೇ ಅದರ ಪ್ರಥಮ ಶರ್ತವಾಗಿದ್ದರೆ, ತರುವಾಯ ಪ್ರಜಾತಂತ್ರ ಅಥವಾ ಕಮ್ಯೂನಿಝಮ್ ಸಿದ್ಧಾಂತಕ್ಕೆ ಯಾವೊಬ್ಬ ಕಾರ್ಯಕರ್ತನೂ ದೊರೆಯಲಸಾಧ್ಯ. ಯಾಕೆಂದರೆ, ಪ್ರಸ್ತುತ ಸಿದ್ಧಾಂತಗಳಿಗೆ ಭೂತಕಾಲ ಚರಿತ್ರೆಯಲ್ಲಿ ಒಮ್ಮೆಯಾದರೂ ತಳವೂರುವ ಅವಕಾಶ ದೊರೆತಿಲ್ಲ. ಆದರೆ ಅದರ ವಕ್ತಾರರು ತಮಗೆ ಬೌದ್ಧಿಕ ಸಂತೃಪ್ತಿ ದೊರೆತರೆ ಸಾಕೆಂದು ಭಾವಿಸುತ್ತಾರೆ. ತಮ್ಮ ತತ್ವ ಮತ್ತು ವ್ಯವಸ್ಥೆಗಳು ಸೂಕ್ತ ಹಾಗೂ ಫಲಕಾರಿಯೆಂದು ಮನಗಂಡು, ಅದಕ್ಕಾಗಿ ತೀವ್ರ ಶ್ರಮ ನಡೆಸುತ್ತಾರೆ. ಗತ ಜನಾಂಗದ ಸಹಸ್ರಾರು ಮಂದಿ ಈ ವ್ಯವಸ್ಥೆಯ ಸ್ಥಾಪನೆಯ ಪ್ರಯತ್ನಗಳಲ್ಲಿ ಸೋತಿರುವ ಹಿನ್ನೆಲೆಯಲ್ಲಿ,

ನಾವು ಯಾವ ಆಶೆಯಿಂದ ಅದಕ್ಕಾಗಿ ಹೊರಟಿದ್ದೇವೆಂಬುದನ್ನು ಅವರೆಂದೂ ಆಲೋಚಿಸುವುದಿಲ್ಲ. ಅಲ್ಲದೆ ವಿವೇಕತನ, ನಿರ್ಧಾರ ಮತ್ತು ಮಾನಸಿಕ ಸಂತೃಪ್ತಿಯಿಂದ ಅವರು ಹಾಗೆ ಆಲೋಚಿಸಿದ್ದರೆ ಅದು ನಿಜಕ್ಕೂ ಮೂರ್ಖತನವೆನಿಸುವುದು.

ಆದರೆ ಇಸ್ಲಾಮೀ ವ್ಯವಸ್ಥೆಯ ವಿಷಯ ಹಾಗಲ್ಲ. ಅದು ರೂಢಿಯಲ್ಲಿರುವ ಪ್ರಸ್ತುತ ಎರಡು ವ್ಯವಸ್ಥೆಗಳಿಗಿಂತ ಭಿನ್ನವಾಗಿದೆ. ಇಸ್ಲಾಮೀ ವ್ಯವಸ್ಥೆಯ ವಾಹಕರ ಸಕ್ರಿಯತೆಗೆ ದ್ವಿಮುಖ ಪ್ರೇರಣೆಗಳಿವೆ. ಒಂದನೆಯದಾಗಿ ಹೃದಯದ ಸಂಪೂರ್ಣ ಸಂತೃಪ್ತಿಗಾಗಿ ಬೇಕಾದ ಎಲ್ಲವೂ ಇಸ್ಲಾಮಿನಲ್ಲಿ ದೊರೆಯುವುದು. ಎರಡನೆಯದಾಗಿ ಈ ವ್ಯವಸ್ಥೆಯು ಹಿಂದಿನ ಕಾಲದಲ್ಲಿ ಸ್ಥಾಪಿಸಲ್ಪಟ್ಟಿದೆ. ವರ್ತಮಾನ ಕಾಲಕ್ಕೆ ಹೋಲಿಸಿದಾಗ ನಾಗರಿಕ ಸವಲತ್ತುಗಳು ಅತ್ಯಂತ ಕಡಿಮೆಯಿದ್ದಾಗಲೂ ಅದು ಮೂವತ್ತು ವರ್ಷಗಳ ಕಾಲ ಪೂರ್ಣ ರೂಪದಲ್ಲಿ ಅಸ್ತಿತ್ವದಲ್ಲಿತ್ತೆಂಬ ಚಾರಿತ್ರಿಕ ಸತ್ಯವು ಅವರ ಮುಂದಿದೆ.

ಗತಕಾಲ ಚರಿತ್ರೆಯಿಲ್ಲದ ವ್ಯವಸ್ಥೆಗಳಿಗೆ ಕಾರ್ಯಕರ್ತರು ದೊರೆತು, ಅವು ಸ್ಥಾಪನೆಯಾದುದಲ್ಲದೇ ಅವುಗಳ ಪ್ರಭಾವವು ಲೋಕವ್ಯಾಪಕವಾಯಿತು. ಆದರೆ ಉಜ್ವಲ ಇತಿಹಾಸವಿರುವ ಆ ವ್ಯವಸ್ಥೆಯ ಕಾರ್ಯಕರ್ತರು ಸಂದೇಹದ ಸುಳಿಯಲ್ಲಿ ಸಿಲುಕಿರುವುದು ವಿಸ್ಮಯಕಾರಿಯಾಗಿದೆ!

(2) ಇಸ್ಲಾಮೀ ವ್ಯವಸ್ಥೆಯು ಲೋಕದಲ್ಲಿ ಒಂದು ಬಾರಿ ಮಾತ್ರ ಜಾರಿಗೊಂಡಿತು. ಅದು ಕೂಡಾ ಕೇವಲ ಮೂವತ್ತು ವರ್ಷಗಳೆಂಬ ಭಾವನೆಯು ಕುರ್‌ಆನ್ ಮತ್ತು ಇತಿಹಾಸದ ಬಗೆಗಿನ ಅಜ್ಞಾನದ ದ್ಯೋತಕವಾಗಿದೆ. ಮಾನವ ಹುಟ್ಟಿನಷ್ಟು ಪ್ರಾಚೀನವಾದ ಪ್ರವಾದಿತ್ವ ಚರಿತ್ರೆಯನ್ನು ಪವಿತ್ರ ಕುರ್‌ಆನ್ ಸಂಪೂರ್ಣವಾಗಿ ಪ್ರತಿಪಾದಿಸುವುದಿಲ್ಲವೆಂಬುದು ನಿಜ. ಆದರೂ ಕುರ್‌ಆನ್ ಎತ್ತಿ ಹೇಳುವ ಸಂಕ್ಷಿಪ್ತ ಚಾರಿತ್ರಿಕ ಟಿಪ್ಪಣಿಗಳಿಂದ ಈ ಕೆಳಗಿನ ವಿಷಯಗಳು ಸ್ಪಷ್ಟವಾಗುತ್ತದೆ. ಮೊಟ್ಟಮೊದಲಾಗಿ ಪ್ರವಾದಿ ಆದಮರು(ಅ) ತಮ್ಮ ಸಂತತಿಗಳಲ್ಲಿ ಇಸ್ಲಾಮೀ ವ್ಯವಸ್ಥೆಯನ್ನು ಸ್ಥಾಪಿಸಿದರು. ತರುವಾಯ ಅದು ಪ್ರವಾದಿ ಯೂಸುಫ್‌ರ(ಅ) ಮೂಲಕ ಈಜಿಪ್ಟ್‌ನಲ್ಲಿ ಸ್ಥಾಪಿಸಲ್ಪಟ್ಟು ಅನೇಕ ಕಾಲ ನೆಲೆನಿಂತಿತು. ಆ ಬಳಿಕ ಪ್ರವಾದಿ ದಾವೂದ್(ಅ) ಮತ್ತು ಸುಲೈಮಾನ್‌ರು(ಅ)

ಅದನ್ನು ಸ್ಥಾಪಿಸಿ ಸುದೀರ್ಘಕಾಲ ವ್ಯಾಪಕವಾಗಿ ಮುನ್ನಡೆಸಿದರು. ಇದರಿಂದ ಇತಿಹಾಸದ ವಿವಿಧ ಘಟ್ಟಗಳಲ್ಲಿ ಯಾವೆಲ್ಲ ಪ್ರವಾದಿಗಳೂ, ಯಾವೆಲ್ಲ ಮಹಾಪುರುಷರೂ, ಲೋಕದ ಯಾವೆಡೆಗಳಲ್ಲಿ ಎಷ್ಟು ಬಾರಿ ಇಸ್ಲಾಮೀ ವ್ಯವಸ್ಥೆಯನ್ನು ಸ್ಥಾಪಿಸಿದ್ದರೆಂಬುದನ್ನು ಸ್ವಯಂ ಊಹಿಸಬಹುದು. ಅರಬರಿಗೆ ಪರಿಚಯವಿದ್ದ ಜನಾಂಗ ಮತ್ತು ಪ್ರದೇಶಗಳಿಗೆ ಸಂಬಂಧಿಸಿದ ಪ್ರವಾದಿಗಳ ಹಾಗೂ ಧರ್ಮದ ಚರಿತ್ರೆಗಳ ಬಗ್ಗೆ ಮಾತ್ರ ಕುರ್‌ಆನ್ ಪ್ರತಿಪಾದಿಸಿದೆ. ಹೀಗಿದ್ದರೂ ಕೊನೆಯದಾಗಿ ಪ್ರವಾದಿ ಮುಹಮ್ಮದ್‌ರ(ಸ) ಮೂಲಕ ಅದು ಪೂರ್ಣ ತೇಜಸ್ಸಿನಿಂದ ಉದಯಗೊಂಡಿತು. ಆದರೂ ಇಸ್ಲಾಮೀ ವ್ಯವಸ್ಥೆಯು ಕೇವಲ 30 ವರ್ಷ ಉಳಿಯಿತೆಂದು ಸಾಧಿಸಲು ಕೆಲವರು ಪ್ರಯತ್ನಿಸುತ್ತಿರುವುದು ಅಚ್ಚರಿದಾಯಕವಾಗಿದೆ! ಇಸ್ಲಾಮೀ ವ್ಯವಸ್ಥೆಯು ಲೋಕದಲ್ಲಿ ಪದೇ ಪದೇ ಪುನರಾವರ್ತನೆಗೊಂಡಿದೆಯೆಂಬುದೇ ವಾಸ್ತವಿಕ ಸಂಗತಿಯಾಗಿದೆ. ಆದರೆ ಒಮ್ಮೆ ನಾಶ ಹೊಂದಿದ ಬಳಿಕ ಪುನಃ ಸ್ಥಾಪಿಸಲ್ಪಟ್ಟ ಯಾವ ಇಸ್ಲಾಮೇತರ ಪದ್ಧತಿಯೂ ಚರಿತ್ರೆಯಲ್ಲಿ ಕಾಣಸಿಗದು!

(3) 'ಕೇವಲ 30 ವರ್ಷ'ವೆಂದು ಆರೋಪಿಸುವವರು ಅಪಾರ್ಥ ಕಲ್ಪಿಸಿಕೊಂಡಿದ್ದಾರೆ. ಹ. ಅಲೀ(ರ)ಯವರು ಹುತಾತ್ಮರಾಗುವುದರೊಂದಿಗೆ ಇಸ್ಲಾಮೀ ವ್ಯವಸ್ಥೆಯೂ ಅಳಿದು ಅದರ ಕಟ್ಟಡವು ಸಂಪೂರ್ಣ ಮಣ್ಣು ಮುಕ್ಕಿತೆಂದು ಅವರು ಭಾವಿಸಿಕೊಂಡಿದ್ದಾರೆ. ಆದರೆ ಸತ್ಯಾಂಶ ಹಾಗಿಲ್ಲ. ಇಸ್ಲಾಮಿನ ಸಮಗ್ರ ವ್ಯವಸ್ಥೆಯಿಂದ 'ಚುನಾವಣಾ ಸಿದ್ಧಾಂತ'ವನ್ನು ನಿರ್ಲಕ್ಷಿಸಲ್ಪಟ್ಟಂತಹ ಒಂದು ಘಟನೆ ಮಾತ್ರ ಸಂಭವಿಸಿತ್ತು! ಇತರ ಎಲ್ಲವೂ ಹಾಗೆಯೇ ಉಳಿದಿತ್ತು. ನಿಯಮಾವಳಿಗಳು ಹಿಂದಿನಂತೆಯೇ ಇದ್ದುವು. ಆರಾಧನಾ ಕ್ರಮವೂ ಯಥಾವತ್ತಾಗಿ ನಡೆಯುತ್ತಿತ್ತು. ದೇವಮಾರ್ಗದ ಹೋರಾಟ ಯತ್ನಗಳಿಗೂ ಧಕ್ಕೆಯುಂಟಾಗಲಿಲ್ಲ. ಸಾಮಾಜಿಕ ವ್ಯವಸ್ಥೆಯೂ ಬದಲಾಗಿರಲಿಲ್ಲ. ಜನರ ನೈತಿಕ ಮೌಲ್ಯಗಳ ಬುನಾದಿಯು ಕೇವಲ ಇಸ್ಲಾಮೇ ಆಗಿದ್ದಿತು. ಶೈಕ್ಷಣಿಕ ವ್ಯವಸ್ಥೆಯೂ ಹಾಗೆಯೇ! ಮಾದರೀ ಯೋಗ್ಯವಾದ ಆ ಸಂಪೂರ್ಣ ವ್ಯವಸ್ಥೆಯನ್ನು ಗಮನಿಸುವಾಗ, ಅದರಲ್ಲಿ ತಾತ್ವಿಕವಾಗಿ ಮಾರ್ಪಾಟುಂಟಾಯಿತೆಂದೇ ನಾವೂ ಅಭಿಪ್ರಾಯಪಡುತ್ತೇವೆ. ಆದರೆ ಅದೊಂದು ಆಮೂಲಾಗ್ರ ಬದಲಾವಣೆಯಾಗಿರಲಿಲ್ಲ. ಬದಲಾಗಿ ಸತ್ಯ

ವ್ಯವಸ್ಥೆಯೆಂಬ ಕೋಟೆಯ ಧ್ವಂಸಕ್ಕಾಗಿ ಕಳ್ಳ ಹಾದಿಯೊಂದು ತೆರೆಯಲ್ಪಟ್ಟಿತು. ಇತರೆಲ್ಲಾ ಬದಲಾವಣೆಗಳು ಸಾವಧಾನವಾಗಿ ನಡೆದುವು. ಕಟ್ಟಡದ ಒಂದೊಂದೇ ಇಟ್ಟಿಗೆಯನ್ನು ಮೆಲ್ಲ ಮೆಲ್ಲನೆ ಸರಿಸುತ್ತಾ ಹಲವು ಕಾಲ ಸಂದಾಗ, ಅದರ ಎಲ್ಲಾ ಭಾಗಗಳೂ ಮಾರ್ಪಾಟು ಹೊಂದಿದುವು.

ವಾಸ್ತವದಲ್ಲಿ ಆ ಎಲ್ಲಾ ಅಡಚಣೆಗಳು ಅರಮನೆ ಮತ್ತು ರಾಜ ದರ್ಬಾರುಗಳಲ್ಲಿ ನಡೆಯುತ್ತಿದ್ದುವು. ಜನಸಾಮಾನ್ಯರ ಜೀವನವು ಸರ್ವ ಸಾಮಾನ್ಯವಾಗಿ ಅನುಗ್ರಹೀತ ಕಾಲದಲ್ಲಿ ಸ್ಥಾಪನೆಗೊಂಡ ಮಾದರಿಯಲ್ಲಿಯೇ ಸ್ಥಿರವಾಗಿತ್ತು. ಈ ವಾತಾವರಣವು ಅನೇಕ ಸ್ಥಿತ್ಯಂತರಗಳ ಹೊರತಾಗಿಯೂ ಸುಮಾರು ಎಂಟುನೂರು ವರುಷಗಳ ಕಾಲ ಅಸ್ತಿತ್ವದಲ್ಲಿತ್ತು. ಕೊನೆಯ ಎರಡು ಮೂರು ಶತಮಾನಗಳಲ್ಲಿ ಜನಸಾಮಾನ್ಯರು ನೈತಿಕವಾಗಿ ಅಧಃಪತನಗೊಂಡು ಧಾರ್ಮಿಕ ಮತ್ತು ಸಾಮಾಜಿಕ ರಂಗಗಳು ದುರಂತಮಯವಾಗಿ, ಸಮಾಜವು ಇಸ್ಲಾಮೀ ಬುನಾದಿಯಿಂದ ದೂರ ಸರಿಯಲಾರಂಭಿಸಿತು. ಅದೇ ಕಾಲದಲ್ಲಿ ಇಸ್ಲಾಮೀ ಸಮಾಜವೆಂಬ ನೌಕೆಯು ಅಧಃಪತನದ ತೆರೆಗಳಿಗೆ ಸಿಲುಕಿತು. ಶ್ರೀಮಂತರು ಮತ್ತು ಆಡಳಿತಗಾರರು ಹಿಂದಿಗಿಂತ ದುಷ್ಟರಾಗುತ್ತಿದ್ದರೂ, ಸತ್ಯ ವ್ಯವಸ್ಥೆಯ ಸಾಕ್ಷಾತ್ ಮೌಲ್ಯಗಳು ಜೀವನದಲ್ಲಿ ಪ್ರಭಾವಿತವಾಗಿದ್ದ ತನಕ ಮುಸ್ಲಿಮರು ಸಾಮಾನ್ಯವಾಗಿ ಪ್ರಗತಿಪಥದಲ್ಲಿದ್ದರು. ಸತ್ಯ ವ್ಯವಸ್ಥೆ ಮತ್ತು ಮೌಲ್ಯಗಳು ದುರ್ಬಲವಾದಾಗ ಅಧಃಪತನವು ವ್ಯಾಪಕವಾಯಿತು.

ಆ ಉಜ್ವಲ ಮೂವತ್ತು ವರ್ಷಗಳು ದಯಪಾಲಿಸಿದ ನೈತಿಕ ಬಲವು ಇಸ್ಲಾಮೀ ಸಮಾಜವನ್ನು ಹಲವು ಶತಮಾನಗಳ ವರೆಗೆ ಪ್ರಗತಿ ಪಥದಲ್ಲಿ ಮುನ್ನಡೆಸಿ, ಒಂದು ಸುದೀರ್ಘ ಇತಿಹಾಸಕ್ಕೆ ಅಭ್ಯುದಯವನ್ನು ನೀಡಿರುವುದು ಆ ಸುವರ್ಣ ಕಾಲದ ಒಂದು ಅದ್ಭುತವಾಗಿದೆ. ಆ ಮೂವತ್ತು ವರ್ಷಗಳಲ್ಲಿ ಕೊಡುಗೆಯಿತ್ತ ಬಲವು ಕ್ಷೀಣಿಸಿ ಅದು ತುಂಬುವ ಪ್ರಯತ್ನ ನಡೆಸುತ್ತಿದ್ದು ದರಿಂದಾಗಿ ಮುಸ್ಲಿಮರ ನಾಗರಿಕ ಚಕ್ರವು ಆರಂಭದಲ್ಲಿ ಮಂದಗತಿಯಲ್ಲಿ ನಡೆಯುತ್ತಾ ಕೊನೆಗೆ ನಿಂತು ಬಿಟ್ಟಿತು. ಸಾವಿರಾರು ವರ್ಷಗಳಷ್ಟು ಸುದೀರ್ಘವಾಗಿದ್ದ ಆ ಕಾಲವನ್ನು ಜನರು ಕೇವಲ ಮೂವತ್ತು ವರ್ಷಗಳೆಂದು ಸಂಕ್ಷೇಪಿಸಿ ಹೇಳುವಾಗ ತಿಳುವಳಿಕೆಯಿಲ್ಲದ ಜನರು ನಿರಾಶರಾಗುತ್ತಾರೆ.

# ಇಸ್ಲಾಮೀ ವ್ಯವಸ್ಥೆ ಅಲ್ಪಾಯುವೇ?

(4) ಪ್ರವಾದಿವರ್ಯರ(ಸ) ಮುಂದಾಳ್ತನದಲ್ಲಿ ಇಸ್ಲಾಮಿನ ವಕ್ತಾರರು ಇಸ್ಲಾಮನ್ನು ಒಂದು ಸಾಮಾಜಿಕ ವ್ಯವಸ್ಥೆಯಾಗಿ ಸ್ಥಾಪಿಸಿ ತೋರಿಸಿದಾಗ - ಆರೋಪಕರ ಮಾತಿನಂತೆ ಅದು ಕೇವಲ 30 ವರ್ಷ ಜಾರಿಯಲ್ಲಿದ್ದರೂ - ಅದು ಸಂಪೂರ್ಣ ಮಾದರೀ ಯೋಗ್ಯ ಘನತೆಯನ್ನೇ ಹೊಂದಿತ್ತೆಂಬುದು ಸಂದೇಹಾ ತೀತವಾಗಿದೆ. ಈ ಸ್ಥಾನಮಾನ ಇಸ್ಲಾಮಿನ ವಿನಾ ಅನ್ಯ ವ್ಯವಸ್ಥೆಗಳಿಗೆ ದೊರೆತಿಲ್ಲ. ತಮ್ಮ ಕರ್ತವ್ಯವನ್ನು ಸೂಕ್ತವಾಗಿ ನಿರ್ವಹಿಸಿದರೆಂಬ ಬಗ್ಗೆ ಪ್ರವಾದಿ(ಸ)ವರ್ಯರೂ, ಸಹಾಬಿಗಳೂ ಮುಸ್ಲಿಮ್ ಜನಸಾಮಾನ್ಯರೆಲ್ಲರೂ ಸಂಪೂರ್ಣ ಸಂತೃಪ್ತರಾಗಿದ್ದರು. ಅವರಿಗೆ ಏನಾದರೂ ನೆಪ ಹೇಳುವ ಅಥವಾ ವಿಷಾದದಿಂದ ಇಹಲೋಕ ತ್ಯಜಿಸುವಂತಹ ಪರಿಸ್ಥಿತಿ ಬರಲಿಲ್ಲ. ಅವರು ತಮ್ಮ ನಿರ್ದಿಷ್ಟ ಜೀವನ ಪದ್ಧತಿಯನ್ನು ಸಂಪೂರ್ಣ ಮಾದರೀ ಯೋಗ್ಯವಾಗಿ ಕಾರ್ಯಗತಗೊಳಿಸಿ ತೋರಿಸಿದರು.

ಆದರೆ ಪ್ರಜಾತಂತ್ರ ಮತ್ತು ಕಮ್ಯೂನಿಝುಮ್ ಮುಂತಾದ ಲೌಕಿಕ ಸಿದ್ಧಾಂತಗಳನ್ನು ನಂಬಿ "ಕೇವಲ ಮೂವತ್ತು ವರುಷವೆಂಬ ವಾದ ಮುಂದಿಡುವವರು ಪ್ರಸ್ತುತ ಪ್ರಜಾತಂತ್ರ ಮತ್ತು ಕಮ್ಯೂನಿಝುಮ್‌ಗಳು ಈ ತನಕ ಅವುಗಳ ಸಾಕ್ಷಾತ್ ರೂಪದಲ್ಲಿ ಕ್ಷಣಮಾತ್ರವೂ ಭೂಮಿಯ ಮೇಲೆ ಸ್ಥಾಪಿಸಲ್ಪಡಲಿಲ್ಲವೆಂಬ ಸತ್ಯವನ್ನು ಗ್ರಹಿಸದಿರುವುದು ದುರದೃಷ್ಟಕರ.

ಸಾಕ್ಷಾತ್ ಪ್ರಜಾತಂತ್ರವು ಕೇವಲ ಅಕ್ಷರಗಳಿಗೆ ಸೀಮಿತವಾಗಿದೆಯೇ ವಿನಾ ಯಥಾರ್ಥದಲ್ಲಿ ಈ ತನಕ ಭೂಮಿಯಲ್ಲೆಲ್ಲಿಯೂ ಸ್ಥಾಪಿತವಾಗಿಲ್ಲವೆಂದು ಪ್ರಜಾತಾಂತ್ರಿಕ ಚಿಂತಕರೆಲ್ಲರೂ ಒಕ್ಕೊರಳಿನಿಂದ ಒಪ್ಪುತ್ತಾರೆ. ಬರ್ನಾರ್ಡ್ ಶಾರ ಮಾತಿನಂತೆ ಮಾನವೀಯತೆಯ ಸುಪ್ರಭಾತ ಸಮೀಪಿಸಿತೆನ್ನಲು ಈಗಲೂ ಕಷ್ಟ. ಹೆಂಡ್ರಿಕ್‌ವಾನ್‌ಲಾನ್ ತನ್ನ ಲೋಕಚರಿತ್ರೆಯ (Pocket History of the World) ಕೊನೆಯಲ್ಲಿ ಹೇಳಿರುವ ಮಾತು ಎಷ್ಟೊಂದು ಅರ್ಥವತ್ತಾಗಿದೆ. "ನಾವು ಗಂಡಾಂತರಕಾರಿಯಾದ ಇನ್ನೂ ಅನೇಕ ತಪ್ಪು ಮಾರ್ಗಗಳನ್ನು ಅವಲಂಬಿಸಬಹುದು. ಆದರೆ ಸನ್ಮಾರ್ಗವನ್ನು ಕಂಡು ಹಿಡಿಯಲು ಎಂದಾದರೊಮ್ಮೆ ಸಾಧ್ಯವಾದೀತಷ್ಟೆ."

ಇದು ಮಾರ್ಕ್ಸಿಸ್ಟ್ ಸಿದ್ಧಾಂತದ ಮಟ್ಟಿಗೆ ಸಮಂಜಸವಾಗಿದೆ. ನಾವೀಗಲೂ ಒಂದು ಮಧ್ಯಾವದಿ ಹಂತದಲ್ಲಿ (Transitional Period) ಸಾಗುತ್ತಿರುವೆವೆಂದು ಅದರ ವಕ್ತಾರರೇ ಒಪ್ಪುತ್ತಾರೆ. ಅವರು ಬಯಸಿದ ಉನ್ನತ ಧ್ಯೇಯವನ್ನು ಸಾಧಿಸಿದ ಬಳಿಕ 'ಅನಿವಾರ್ಯ ದೋಷ' (Necessary Evil) ವೆಂಬ ನೆಲೆಯಲ್ಲಿ ಇಂದು ಅಂಗೀಕರಿಸಿರುವ ರಾಷ್ಟ್ರದ ಅಸ್ತಿತ್ವವು ಕೊನೆಗೊಂಡು ಪ್ರತಿಯೊಬ್ಬನಿಗೂ "ಸಾಮರ್ಥ್ಯವಿದ್ದಷ್ಟು ಕೆಲಸ, ಅಗತ್ಯವಿರುವಷ್ಟು ಸಂಬಳ" ಎಂಬ ಇನ್ನೊಂದು ಬದಲಾವಣೆ ಬರುವುದು. ಈ ಉನ್ನತ ಧ್ಯೇಯ ಮತ್ತು ಪ್ರಚಲಿತ ಪರಿಸ್ಥಿತಿಯ ನಡುವೆ ಎಷ್ಟು ಶತಮಾನಗಳ ಅಂತರವಿರಬಹುದೆಂಬುದು ವ್ಯಕ್ತವಲ್ಲ. ಹೌದು, ಸಾಕ್ಷಾತ್ 'ಕೆಂಪು ಸ್ವರ್ಗ'ವು ಭವಿಷ್ಯದ ಅನಂತರದಲ್ಲಿ ಅದೆಲ್ಲೋ ಅಡಗಿಕೊಂಡಿದೆ.

ಸಂಕ್ಷಿಪ್ತವಾಗಿ ಹೇಳುವುದಿದ್ದರೆ ಇಂದು ನಾವು ಎದುರಿಸಬೇಕಾದ ಯಾವ ಸಿದ್ಧಾಂತವೂ, ಅದರ ನೈಜ ರೂಪದಲ್ಲಿ ಈ ಲೋಕದಲ್ಲಿ ಇಂದಿನ ತನಕ ಕ್ಷಣಕಾಲವೂ ಸ್ಥಾಪಿಸಲ್ಪಟ್ಟಿಲ್ಲ. ಅವುಗಳ ವಕ್ತಾರರು ವಿಕೃತ ಸಿದ್ಧಾಂತಗಳನ್ನು ಹೇರಿಕೊಂಡು ನಡೆಯುತ್ತಾರೆ. ಆದರೆ ಇಸ್ಲಾಮ್ ತನ್ನ ವಾಹಕರನ್ನು ಉಜ್ವಲ ಭವಿಷ್ಯದೆಡೆಗೆ ಆಹ್ವಾನಿಸುವುದರೊಂದಿಗೆ, ಭೂತಕಾಲದಲ್ಲಿ ಮೂವತ್ತು ವರ್ಷ ಪ್ರಸ್ತುತ ವ್ಯವಸ್ಥೆಯು ನೈಜರೂಪದಲ್ಲಿ ಅಸ್ತಿತ್ವದಲ್ಲಿತ್ತೆಂದೂ ಅವರಿಗೆ ತೋರಿಸಿಕೊಡುತ್ತದೆ. ಇಸ್ಲಾಮಿನ ಹೊರತು ಇನ್ನಾವುದೇ ವ್ಯವಸ್ಥೆಯು ಮೂವತ್ತು ವರುಷವಂತಿರಲಿ, ಒಂದು ವರ್ಷವಾದರೂ ಅದರ ಆದರ್ಶ ಸಿದ್ಧಾಂತಗಳನ್ನು ಯಥಾವತ್ತಾಗಿ ಕಾರ್ಯಗತಗೊಳಿಸಿದ ಉದಾಹರಣೆ ಮಾನವೇತಿಹಾಸದಲ್ಲಿ ಕಾಣಸಿಗುವುದೇ?

(5) ಒಮ್ಮೆ ನಾಶ ಹೊಂದಿದರೆ ಪುನಃ ಉತ್ಥಾನ ಹೊಂದುವ ಸ್ಫೂರ್ತಿಯನ್ನು ಉಳಿಸಿಕೊಂಡು ಏನಾದರೂ ಮೂಲಭೂತ ಬದಲಾವಣೆ ಮಾಡಿದರೆ ಅದರ ವಿರುದ್ಧ ಹೋರಾಡಿ ನೈಜ ತತ್ವಗಳನ್ನು ಪುನರುತ್ಥಾನಗೊಳಿಸುವ ಪ್ರಯತ್ನಗಳಲ್ಲಿ ತೊಡಗುವ, ಯಾವುದಾದರೂ ವ್ಯವಸ್ಥೆ ಲೋಕದಲ್ಲಿದ್ದರೆ ಅದು ಇಸ್ಲಾಮ್ ಮಾತ್ರವಾಗಿದೆ.

ಪೋಪ್ ಸಿದ್ಧಾಂತ ಅಸ್ತಿತ್ವದಲ್ಲಿದ್ದ ರಾಷ್ಟ್ರಗಳಿಂದ ಅದು ನಾಶಗೊಂಡ ಬಳಿಕ ಅದನ್ನು ಪುನಃ ಸ್ಥಾಪಿಸ ಬಯಸುವವರು ಯಾರೂ ಇರಲಿಲ್ಲ. ಜಾಗೀರುದಾರಿ

ಪದ್ಧತಿಯು ಕೊನೆಗೊಂಡ ಪ್ರದೇಶಗಳಲ್ಲಿ ಅದನ್ನು ಪುನರುತ್ಥಾನಗೊಳಿಸುವ ಯಾವ ಚಳವಳಿಯೂ ನಡೆಯಲಿಲ್ಲ. ನುಚ್ಚುನೂರಾಗುತ್ತಿರುವ ಭಂಡವಾಳಶಾಹಿ ಪದ್ಧತಿಯನ್ನು ಬದುಕಿಸಲು ಯಾರೂ ಪ್ರಯತ್ನಿಸುವುದಿಲ್ಲ. ಅದಲ್ಲದೇ ಇಸ್ಲಾಮೇತರ ಪದ್ಧತಿಗಳ ವಕ್ತಾರರು ತಮ್ಮ ಗತಕಾಲವನ್ನು ಜಿಗುಪ್ಸೆಯಿಂದ ಕಂಡು, ಹಿಂದಿನ ಕಾಲದ ಕೃತ್ಯಗಳ ಬಗ್ಗೆ ಅಡ್ಡಿ ಆತಂಕಗಳನ್ನು ಹೇಳುತ್ತಾರೆ. ಆದರೆ ಇಸ್ಲಾಮಿನ ವಾಹಕರ ಭೂತಕಾಲವು ಅಭಿಮಾನ ಹಾಗೂ ಸ್ಫೂರ್ತಿದಾಯಕವಾಗಿ ಶೋಭಿಸುತ್ತಿದೆ. ಪ್ರಸ್ತುತ ಭೂತಕಾಲದ ಪುನರುತ್ಥಾನದಲ್ಲಿಯೇ ಅವರು ತಮ್ಮ ಭವಿಷ್ಯದ ವಿಜಯ ಸೌಭಾಗ್ಯಗಳನ್ನು ಸದಾ ಇದಿರು ನೋಡುತ್ತಾರೆ. ಸತ್ಯದ ವ್ಯವಸ್ಥೆಯು ಕೇವಲ ಮೂವತ್ತು ವರ್ಷ ಅಸ್ತಿತ್ವದಲ್ಲಿತ್ತೆಂದೇ ಭಾವಿಸಿದರೂ ಅದು ತುಂಬಾ ಪುನೀತ ಕಾಲವಾಗಿತ್ತು. ಅಂದಿನ ಯಾವುದೇ ಘಟನೆಯ ಕುರಿತು ಯಾರಿಗೂ ಅಡ್ಡಿ ಆತಂಕ ಹೇಳುವ ಪ್ರಮೇಯವೇ ಇಲ್ಲ. ಅಂದಿನ ಘಟನೆಗಳು ಪಾಠ ಕಲಿಯಬೇಕಾದಂತಹ ತಪ್ಪುಗಳಾಗಿದ್ದುವೆಂದೋ, ಆ ತಪ್ಪುಗಳಿಂದ ಉಳಿಯುವುದನ್ನು ಪ್ರತಿಗಾಮಿತನವೆಂದೋ ಹೇಳಲು ನಾವು ಸಿದ್ಧರಿಲ್ಲ.

ಪ್ರಜಾತಾಂತ್ರಿಕ ರಾಷ್ಟ್ರಗಳಲ್ಲಿ ಜೀವನ ಪದ್ಧತಿಯು ಬದಲಾಗುತ್ತಿದೆ. ಆದರೆ ಜನರು ಅದನ್ನು ಪ್ರಗತಿಪರವೆಂದು ಭಾವಿಸಿ ಹಿಂದಿನ ಮಾರ್ಗಗಳನ್ನು ಅಜ್ಞಾನದ ಪರೀಕ್ಷೆಗಳೆಂದು ನಂಬುತ್ತಾರೆ. ಪ್ರಚಲಿತವಿರುವುದನ್ನು ಬದಲಾಯಿಸಲು ಪ್ರಯತ್ನಿಸುತ್ತಾರೆ. ಆದರೆ ಪ್ರತಿಗಾಮಿ ಚಟುವಟಿಕೆಗಳಿಗೆ ಯಾರೂ ಮುಂದಾಗುವುದಿಲ್ಲ. ಅಮೀರ್ ಮುಆವಿಯಾರ ಕಾಲದಲ್ಲಿ ಇಸ್ಲಾಮಿ ವ್ಯವಸ್ಥೆಯಲ್ಲಿ ನಡೆದ ಬದಲಾವಣೆಗಿಂತಲೂ ದೊಡ್ಡ ಬದಲಾವಣೆಗಳು ಕಮ್ಯೂನಿಸ್ಟ್ ವ್ಯವಸ್ಥೆಯಲ್ಲಿ ನಡೆಯುತ್ತಿವೆ. ಲೆನಿನ್ ಮತ್ತು ಟ್ರೋಟಸ್ಕಿಯವರ ಪರಸ್ಪರ ಭಿನ್ನಾಭಿಪ್ರಾಯಗಳು, ಇಸ್ಲಾಮಿ ಇತಿಹಾಸದಲ್ಲಿ ಅಮೀರ್ ಮುಆವಿಯಾರ ನೀತಿಯ ಬಗ್ಗೆ ಇಮಾಮ್ ಹುಸೈನ್‌ರಿಗಿದ್ದ ಭಿನ್ನಾಭಿಪ್ರಾಯಕ್ಕಿಂತ ಕಡಿಮೆಯ ದಲ್ಲವೆಂದು ಧೈರ್ಯವಾಗಿ ಹೇಳಬಹುದು. ಇಮಾಮ್ ಹುಸೈನ್‌ರ ರಕ್ತ ಹೀರಿ ನಮ್ಮ ಚರಿತ್ರೆಯು ಮುನ್ನಡೆದಂತೆಯೇ ರಶ್ಯದ ಕಮ್ಯುನಿಸ್ಟ್ ಇತಿಹಾಸದ ಅಲೆಗಳು ಟ್ರೋಟಸ್ಕಿಯನ್ನು ಒಡೆದ ಮಡಿಕೆಯಂತೆ ದೂರಕ್ಕೆಸೆಯಿತು! ಮೂಲಭೂತವಾಗಿ ಇಕ್ಕೆಡೆಗಳಲ್ಲಿ ಬದಲಾವಣೆಯುಂಟಾಗಿದ್ದರೂ ಒಂದೇ ರೀತಿಯ

ಘಟನೆಗಳನ್ನು ಉಭಯ ಕಡೆಯಲ್ಲಿ ಭಿನ್ನ ದೃಷ್ಟಿಕೋನದಿಂದ ವೀಕ್ಷಿಸಲಾಗುತ್ತಿದೆ. ಕರ್ಬಲಾ ಘಟನೆಯಿಂದ ಇತಿಹಾಸದಲ್ಲಾದ ವೈಪರೀತ್ಯವನ್ನು ನಾವು ತಪ್ಪೆಂದು ಭಾವಿಸುತ್ತೇವೆ. ಆದರೆ ರಶ್ಯನ್ ಇತಿಹಾಸದ ವ್ಯತಿಚಲನವನ್ನು ಪ್ರಸ್ತುತ ಇತಿಹಾಸಕರ್ತರು ಪ್ರಗತಿಯ ಸಂಕೇತವೆಂದು ಪರಿಗಣಿಸುತ್ತಾರೆ. ಘಟನೆಗಳ ವಾಸ್ತವಿಕತೆಯನ್ನು ಗಮನಿಸಿದಾಗ ಅನೇಕ ಮೂಲಭೂತ ತತ್ವಗಳನ್ನು ಲೆನಿನ್ ಬದಲಾಯಿಸಬೇಕಾಯಿತೆಂದು ಗ್ರಹಿಸಬಹುದು. ತರುವಾಯ ಬಂದ ಸ್ಟಾಲಿನ್ ಅವುಗಳನ್ನು ಪುನಃ ಬದಲಾಯಿಸಿದನು. ಕೋಲ್ಖೋಝ್ (Koelkhoz) ಕ್ರಾಂತಿಯ ಹಿನ್ನೆಲೆಯಲ್ಲಿ ಲೆನಿನ್ ಒಂದು ಹೊಸ ಕೃಷಿ ನೀತಿಯನ್ನು ಅಂಗೀಕರಿಸಿದನು. ತರುವಾಯ ಎಲ್ಲ ನೀತಿಗಳನ್ನೂ ಸಮಗ್ರ ರಾಷ್ಟ್ರೀಯತೆಯೆಂದು ರಾಷ್ಟ್ರೀಯ ಬುನಾದಿಗೆ ಬದಲಾಯಿಸಬೇಕಾಯಿತು. ಧಾರ್ಮಿಕ ವಿರೋಧವನ್ನು ಸಡಿಲಗೊಳಿಸಲಾಯಿತು. ಖಾಸಗಿ ಒಡೆತನಕ್ಕೆ ಸಂಬಂಧಿಸಿದ ಹಳೆಯ ತತ್ವಗಳಲ್ಲಿ ತೀವ್ರ ತಿದ್ದುಪಡಿಗಳನ್ನು ಮಾಡಿದರು. ಪಾಶ್ಚಾತ್ಯ ಸಾಮ್ರಾಜ್ಯಶಾಹಿತ್ವದ ವಿರೋಧಿಗಳಾಗಿದ್ದವರು ಸ್ವಯಂ ಅದರ ಧ್ವಜವಾಹಕರಾದರು. ಈ ನೂತನ ಮಾರ್ಪಾಟುಗಳನ್ನು ಪ್ರತಿಗಾಮಿ ಮೈಲುಗಲ್ಲುಗಳೆಂದು ಪರಿಗಣಿಸಲಾಯಿತು.

ಆದರೆ, ಇಸ್ಲಾಮಿನ ಮಾದರೀ ಯೋಗ್ಯ ವ್ಯವಸ್ಥೆಯಲ್ಲಿ ಇಂತಹ ಬದಲಾವಣೆಯ ಶ್ರಮ ನಡೆದಾಗಲೆಲ್ಲಾ ಮುಸ್ಲಿಮರು ಅದರ ವಿರುದ್ಧ ರೋಷಾವೇಶ ಪ್ರದರ್ಶಿಸಿದ್ದರು. ಸುಧಾರಕರು ಜನಮನವನ್ನು ತದ್ವಿರುದ್ಧವಾಗಿ ಸಿದ್ಧಗೊಳಿಸಿದ್ದರು. ಸತ್ಯಸೇವಕರು ತೀವ್ರ ಪ್ರತಿಭಟನೆ ಮೊಳಗಿಸಿದ್ದರು. ಸಂದರ್ಭ ಸಿಕ್ಕಾಗಲೆಲ್ಲಾ ಪ್ರತೀಯೋರ್ವ ಸುಧಾರಕನು ನೈಜ ವ್ಯವಸ್ಥೆಯ ತತ್ವಗಳನ್ನು ಪುನರ್ ಸ್ಥಾಪಿಸಲು ಪ್ರಯತ್ನಿಸಿದ್ದನು. ವೈಚಾರಿಕ, ವೈಜ್ಞಾನಿಕ ಹಾಗೂ ರಾಜಕೀಯ ಇತಿಹಾಸದಲ್ಲಿ ಅಂತಹ ಪ್ರಯತ್ನಗಳ ಅನೇಕ ಉದಾಹರಣೆಗಳನ್ನು ಕಾಣಬಹುದು. ಮಾದರೀ ಯೋಗ್ಯ ವ್ಯವಸ್ಥೆಯ ಪುನರುತ್ಥಾನದ ದಿಗ್ವಿಜಯವನ್ನು ಉಮರ್ ಬಿನ್ ಅಬ್ದುಲ್ ಅಝೀಝ್‌ರ(ರ) ಕಾಲದಲ್ಲಿ ಕಾಣುತ್ತೇವೆ. ಇತರ ಅನೇಕ ಮಹಾಪುರುಷರ ಚಟುವಟಿಕೆಗಳನ್ನೂ ಮರೆಯುವಂತಿಲ್ಲ. ಸಂಪೂರ್ಣ ವ್ಯವಸ್ಥೆಯನ್ನು ಪುನರುತ್ಥಾನಗೊಳಿಸಲಾಗದಿದ್ದರೂ ತಮಗೆ ಸಾಧ್ಯವಿರುವ ಅಂಶಗಳೆಲ್ಲವನ್ನು ಪುನರ್ ಸ್ಥಾಪಿಸುವ ಗರಿಷ್ಠ ಪ್ರಯತ್ನವನ್ನು ಅವರು ಮಾಡಿದ್ದಾರೆ. ಈ ಪುನರುತ್ಥಾನ ಸ್ಫೂರ್ತಿಯು ಮುಸ್ಲಿಮ್ ಸಮುದಾಯದಲ್ಲಿ

ಅವ್ಯಾಹತವಾಗಿತ್ತು. ಇಂದು ಇಸ್ಲಾಮೀ ಜೀವನ ಕ್ರಮದ ಮೌಲ್ಯಗಳೊಂದಿಗೆ ಸಂಬಂಧ, ಅವುಗಳನ್ನು ಜೀವನದಲ್ಲಿ ಮೈಗೂಡಿಸಬೇಕೆಂಬ ಹಂಬಲಗಳೆಲ್ಲವೂ ಪ್ರಸ್ತುತ ಸ್ಫೂರ್ತಿಯು ಇಂದಿಗೂ ಅಬಾಧಿತವಾಗಿದೆಯೆಂಬುದರ ಲಕ್ಷಣವಾಗಿದೆ.

## ಇಸ್ಲಾಮೀ ವ್ಯವಸ್ಥೆ ಸ್ಥಾಪನೆಯಾಗದಿರುತ್ತಿದ್ದರೆ?

ಪಾವನ ಸಮಾಜ, ಪ್ರಾಮಾಣಿಕ ಆಡಳಿತ, ನೀತಿನಿಷ್ಠ ಸಂಸ್ಕೃತಿ ಅಥವಾ ಸಾಮಾಜಿಕ ವ್ಯವಸ್ಥೆಗಳು ಸ್ವಲ್ಪ ದಿನದ ಮಟ್ಟಿಗಾದರೂ ಲೋಕದಲ್ಲಿ ಉದಯವಾದರೆ ಅದು ಅಂತ್ಯವಾಗುವುದಕ್ಕಿಂತ ಮುಂಚಿತವಾಗಿ ಮಾನವ ಚರಿತ್ರೆಯಲ್ಲಿ ಗಾಢ ಪರಿಣಾಮಗಳನ್ನುಂಟು ಮಾಡುತ್ತವೆ. ಇಂದು ಯಾವುದಾದರೊಂದು ರಾಷ್ಟ್ರದಲ್ಲಿ ನೈಜ ಇಸ್ಲಾಮೀ ಆಡಳಿತವು ಜಾರಿಗೊಂಡು, ಅದು ಕೇವಲ ಮೂವತ್ತು ವರ್ಷಗಳಲ್ಲಿ ಉರುಳಿ ಹೋದರೆ, ಅದರ ಅಂತ್ಯವು ಬರೆಹದಿಂದ ತಪ್ಪಿದ ಅಕ್ಷರದಂತೆ ಶಾಶ್ವತವಾಗಿ ನಿರ್ಮೂಲನವಾಗುವುದೆಂದು ಭಾವಿಸಬಹುದೇ? ಮಾನವೇತಿಹಾಸದಲ್ಲಿ ಮಾನವಕುಲದ ಸಾಮಾನ್ಯ ವಿಚಾರಧಾರೆಗಳಲ್ಲಿಯೂ, ನೈತಿಕ ಆಚಾರಗಳಲ್ಲಿಯೂ ಅದರ ಪ್ರಭಾವವು ಉಳಿಯಲಾರದೇ? ನಿಮ್ಮ ಉತ್ತರವು ನಕಾರಾತ್ಮಕವೆಂದಾದರೆ ಮಾನವ ನಾಗರಿಕತೆಗಳನ್ನು ಕಡೆಗಣಿಸಿ ನೀವು ಚಿಂತನೆ ಮಾಡುತ್ತೀರೆಂದು ಹೇಳಬೇಕಾಗುವುದು. ಹಗಲು ಅದೆಷ್ಟೇ ಚಿಕ್ಕದಾದರೂ, ಸೂರ್ಯನನ್ನು ಮೋಡ ಮುತ್ತಿದರೂ, ಸೂರ್ಯೋದಯದ ನೈಸರ್ಗಿಕ ಪ್ರತಿಕ್ರಿಯೆಗಳು ಸಕಲ ಚರಾಚರಗಳಲ್ಲಿಯೂ ಪ್ರತಿಬಿಂಬಿಸುವುದು ಖಚಿತವಷ್ಟೆ. ತರುವಾಯ ದೀರ್ಘ ರಾತ್ರೆಯ ಕತ್ತಲು ಮತ್ತು ತಂಪು ಆವರಿಸಿದರೂ ಸೂರ್ಯ ಪ್ರಕಾಶದ ನೈಸರ್ಗಿಕ ಪರಿಣಾಮಗಳನ್ನು ಸರ್ವನಾಶ ಮಾಡಲು ಅದಕ್ಕೆ ಸಾಧ್ಯವಿಲ್ಲ. ಹಾಗೆಯೇ ಸತ್ಯ ವ್ಯವಸ್ಥೆಯ ಉದಯವು ಅದೆಷ್ಟೇ ಅಲ್ಪಾವಧಿಯದಾಗಿದ್ದರೂ ಕೆಲವಂಶಗಳಲ್ಲಿ ಅದೆಷ್ಟೇ ಅಪೂರ್ಣವಾಗಿದ್ದರೂ, ಮಾನವ ಜೀವನದಲ್ಲಿ ಅದರ ಸತ್ಪರಿಣಾಮಗಳುಂಟಾಗುವುದು ಖಚಿತ. ಅವುಗಳನ್ನು ಆಮೂಲಾಗ್ರವಾಗಿ ಉಚ್ಚಾಟಿಸಲು ಅನಂತರ ಬರುವ ದುಷ್ಟ ಆಡಳಿತಕ್ಕೂ ಸಾಧ್ಯವಿಲ್ಲ.

ಸತ್ಯ ಮತ್ತು ಒಳಿತಿನ ಬುನಾದಿಯಲ್ಲಿರುವ ಸಾಮಾಜಿಕ ವ್ಯವಸ್ಥೆಯ

ವಿಷಯವನ್ನು ತತ್ಕಾಲಕ್ಕೆ ಕೈ ಬಿಡೋಣ. ಸತ್ಯ ಸೇವಕರ ವ್ಯೆಯಕ್ತಿಕ ನಡವಳಿಕೆಗಳನ್ನು ನೋಡಿದರೆ, ಅವರ ಮಹಾತ್ಕಾರ್ಯಗಳೇ ನಮ್ಮ ಇತಿಹಾಸದ ಪುಟಗಳನ್ನು ಬೆಳಗಿಸಿರುವುದು ವ್ಯಕ್ತವಾಗುತ್ತದೆ. ಆ ಮಹತ್ಕಾರ್ಯಗಳ ಪ್ರಕಾಶದಿಂದಲೇ ನಾವಿಂದು ಅನೇಕ ಮಹತ್ಕಾರ್ಯಗಳಿಗೆ ಕೈ ಹಾಕುತ್ತೇವೆ. ಅವುಗಳಿಂದಾಗಿಯೇ ನಮ್ಮ ಸಾಹಿತ್ಯ ಧಮನಿಗಳಲ್ಲಿ ಸ್ಫೂರ್ತಿಯ ಬಿಸಿರಕ್ತ ಹರಿಯುತ್ತಿದೆ. ನಮ್ಮ ವೈಚಾರಿಕ ವಿಕಾಸಕ್ಕೂ ಅದೇ ಮೂಲವಾಗಿದೆ. ನಮ್ಮ ಆಂದೋಲನಗಳಿಗೆ ಉತ್ತೇಜನವೂ ಅವುಗಳೇ ಆಗಿವೆ. ನೀತಿ ಪಾಠಗಳನ್ನು ಅವುಗಳಿಂದಲೇ ನಾವಿಂದು ಕಲಿಯುತ್ತಿದ್ದೇವೆ.

ಪ್ರವಾದಿ ಈಸಾ(ಅ) ಮತ್ತು ಇಮಾಮ್ ಹುಸೈನ್‌ರ(ರ) ವೀರಕೃತ್ಯಗಳನ್ನೇ ಉದಾಹರಣೆಗಾಗಿ ತೆಗೆದುಕೊಳ್ಳಿರಿ; ಮಾನವತಾ ಪ್ರೇಮಿಗಳಾಗಿದ್ದ ಆ ಮಹಾತ್ಮರು ನಿರ್ವಹಿಸಿದ ಸತ್ಯ ಸೇವೆಯ ಸತ್ಫಲಗಳು ಇಂದು ಸಂಪೂರ್ಣವಾಗಿ ಅಳಿದು ಹೋಗಿವೆಯೇ? ಇತಿಹಾಸದಲ್ಲಿ ಅದರ ಯಾವ ಪಳೆಯುಳಿಕೆಯೂ ಉಳಿದಿಲ್ಲವೇ? ಖಂಡಿತವಾಗಿಯೂ ಉಳಿದಿವೆ. ಸನ್ಮಾರ್ಗದಲ್ಲಿ ಜೀವಿಸುವ ಮಾತಂತಿರಲಿ, ಅದಕ್ಕಾಗಿ ಸಾಯುವುದಕ್ಕೂ ಸಾವಿರಾರು ಆತ್ಮಗಳು ಎದೆ ಕೊಡಲು ಇಂದಿಗೂ ಸಿದ್ಧವಿದೆ. ಒಂದು ಪವಿತ್ರ ಧ್ಯೇಯಕ್ಕಾಗಿ ಒಂದು ಜೀವನವು ಬಲಿಯರ್ಪಿಸಲ್ಪಟ್ಟರೆ ಆ ಧ್ಯೇಯದ ಘನತೆಯು ಪೂರ್ವಾಧಿಕವಾಗುವುದು. ಅದಕ್ಕಾಗಿ ಪ್ರಾಣ ಅರ್ಪಿಸಿ ದೇವಪ್ರೀತಿ ಬಯಸುವ ವೀರ ಯೋಧರು ನವೋತ್ಸಾಹದಿಂದ ರಂಗಕ್ಕೆ ಧುಮುಕುವರು. ಸತ್ಯಕ್ಕಾಗಿ ಪ್ರಾಣಾರ್ಪಣೆ ಮಾಡುವ ಹುಮ್ಮಸ್ಸಿನ ಬೀಜಾಂಕುರ ವಾದರೆ ಅನಂತರ ಅದು ಪದೇ ಪದೇ ಸಮೃದ್ಧವಾಗಿ ಬೆಳೆಯುವುದು!

ವೈಯಕ್ತಿಕ ಮಹತ್ಕಾರ್ಯಗಳ ಫಲವು ಇಷ್ಟೊಂದು ದೂರವ್ಯಾಪಕವಾಗಿರುವಾಗ, ಸತ್ಯ ವ್ಯವಸ್ಥೆಯ ಫಲವು ಯಾವ ಮಟ್ಟಿಗೆ ತಲಪೀತೆಂಬುದನ್ನು ನೀವೇ ಊಹಿಸಬಹುದಾಗಿದೆ. ಹದಿನಾಲ್ಕು ಶತಮಾನಗಳ ಹಿಂದೆ ಅರೇಬಿಯಾದಲ್ಲಿ ಸ್ಥಾಪಿಸಲ್ಪಟ್ಟ ಇಸ್ಲಾಮಿನ ಸಾಂಸ್ಕೃತಿಕ, ರಾಜಕೀಯ ವ್ಯವಸ್ಥೆಗಳು ಅದರ ಅನುಯಾಯಿಗಳಿಗೆ ನೀಡಿದ ವೈಚಾರಿಕ ಹಾಗೂ ಕ್ರಿಯಾತ್ಮಕ ಗುಣಗಳು ಒಂದಿಲ್ಲೊಂದು ರೀತಿಯಲ್ಲಿ ಪರಂಪರಾಗತವಾಗಿ ಇಂದಿಗೂ ನೆಲೆ ನಿಂತಿದೆ. ಅದಲ್ಲದೇ ಅದು ತನ್ನ ವಿರೋಧಿಗಳ ಸಾಂಸ್ಕೃತಿಕ ನಾಗರಿಕತೆಗಳ ಗತಿಯನ್ನೂ

ಬದಲಾಯಿಸಿದೆ. ಯೂರೋಪಿನ ವೈಚಾರಿಕ ಸ್ವಾತಂತ್ರ್ಯ ಚರಿತ್ರೆಯ ನಾಂದಿ ಹಾಕಿದ ಪಾಶ್ಚಾತ್ಯ ನವೋತ್ಥಾನವು (Renaissance) ಇಸ್ಲಾಮೀ ಪ್ರಭಾವದ ನೇರ ಪ್ರತಿಧ್ವನಿಯಾಗಿತ್ತೆಂಬುದು ವೈಜ್ಞಾನಿಕ ಸಂಶೋಧನೆಗಳ ಬಗ್ಗೆ ಕಿಂಚಿತ್ತಾದರೂ ಆಸಕ್ತಿಯುಳ್ಳವರಿಗೆ ತಿಳಿದಿರಬಹುದು. ಪಾಶ್ಚಾತ್ಯರಿಗೆ ವೈಚಾರಿಕ ಹಾಗೂ ನೈಸರ್ಗಿಕ ಜ್ಞಾನ ಭಂಡಾರಗಳ ಕೀಲಿಕೈಯು ಇಸ್ಲಾಮಿನ ವಾಹಕರಾದ ಅರಬರಿಂದ ದೊರೆತಿತ್ತು. ಯೂರೋಪಿನ ರಾಜಕೀಯ ಸಿದ್ಧಾಂತದ ಬೆಳವಣಿಗೆಯನ್ನು ಸೂಕ್ಷ್ಮವಾಗಿ ಅವಲೋಕಿಸಿದರೆ, ಆಧುನಿಕ ಪ್ರಜಾತಂತ್ರ ರಾಜಕೀಯ ಪದ್ಧತಿಯು, ಇಸ್ಲಾಮೀ ವಿಚಾರಧಾರೆಗಳ ಪರೋಕ್ಷ ಪರಿಣಾಮವೆಂಬುದು ವ್ಯಕ್ತವಾಗುತ್ತದೆ. ಪಾಶ್ಚಾತ್ಯ ಪ್ರಜಾತಂತ್ರದ ಉದಯಕ್ಕೆ ಯಥಾರ್ಥದಲ್ಲಿ ಪ್ಲೇಟೋವಿನ ಆದರ್ಶ ಪ್ರಜಾತಂತ್ರವು ಪ್ರೇರಕವಾಗಿರಲಿಲ್ಲ. ಬದಲಾಗಿ ಪ್ರಜಾತಂತ್ರದ ರಚನಾತ್ಮಕ ಉಸಿರನ್ನು ಐರೋಪ್ಯರು ಅರಬರಿಂದ ಪಡೆದು, ತರುವಾಯ ಅದನ್ನು ಭೌತಿಕವಾಗಿ ಎರಕಹೊಯ್ದು ಜಾರಿಗೊಳಿಸಿದರು. ಇಂದು ಪ್ರಶಂಸೆ ಗಳಿಸುತ್ತಿರುವ ನೀತಿ, ಸಮಾನತೆ, ಸಹೋದರತೆ ಇತ್ಯಾದಿ ಕಲ್ಪನೆಗಳೆಲ್ಲವೂ ಇಸ್ಲಾಮಿನ ವೈಚಾರಿಕ ಕೊಡುಗೆಗಳ ವಿಕೃತ ರೂಪಗಳಾಗಿವೆಯೆಂಬುದೇ ದಿಟ. ದೌರ್ಭಾಗ್ಯವಶಾತ್, ದೇವಪ್ರಜ್ಞೆಗೆ ಬದಲಾಗಿ ನಾಸ್ತಿಕ ಮಾರ್ಗದಲ್ಲಿ ಮುನ್ನಡೆಯಲಾರಂಭಿಸಿರುವ ಪಾಶ್ಚಾತ್ಯ ತತ್ವಶಾಸ್ತ್ರಗಳಲ್ಲಿಯೂ ಇಸ್ಲಾಮೀ ತತ್ವಗಳ ಅನೇಕ ಕುರುಹುಗಳು ಅಂಟಿಕೊಂಡಿವೆ. ಆದರೆ ಕೆಟ್ಟ ವಿಚಾರಗಳ ಕಲಬೆರಕೆಯಿಂದಾಗಿ ಅವು ವಿವೇಚಿಸಿ ತಿಳಿಯಲಸಾಧ್ಯವಾದಷ್ಟು ವಿರೂಪಗೊಂಡಿವೆ. ಹಾಗೆಯೇ ಕಾನೂನು, ಅಂತರ್ರಾಷ್ಟ್ರೀಯ ಸಮಸ್ಯೆ ಇತ್ಯಾದಿಗಳಲ್ಲಿಯೂ ಆಧುನಿಕ ಜಗತ್ತು ಇಸ್ಲಾಮಿನಿಂದ ಹಲವು ವಿಷಯಗಳನ್ನು ಎರವಲು ಪಡೆದಿದೆ. ಸಾಹಿತ್ಯದ ವಿಷಯವೂ ಅದಕ್ಕೆ ಹೊರತಾಗಿಲ್ಲ.

ಇಸ್ಲಾಮೀ ವ್ಯವಸ್ಥೆಯು ಮೂವತ್ತು ವರುಷವಾದರೂ ನಡೆಯದಿರುತ್ತಿದ್ದರೆ ಅದರ ಈ ಫಲಗಳೆಲ್ಲವೂ ಹೇಗೆ ಲಭಿಸುತ್ತಿತ್ತು? ಹಾಗಿರುತ್ತಿದ್ದರೆ ಲೋಕ ಚರಿತ್ರೆಯೇ ಬೇರೆಯಾಗುತ್ತಿತ್ತು. ತತ್ವಶಾಸ್ತ್ರ, ರಾಜಕೀಯ, ಕಾನೂನು, ಅಂತರ್ರಾಷ್ಟ್ರೀಯ ವಿಷಯಗಳು, ವಿವಿಧ ವಿಜ್ಞಾನ-ಸಾಹಿತ್ಯ-ಕಲೆ ಇತ್ಯಾದಿಗಳೆಲ್ಲದರ ಬೆಳವಣಿಗೆಯೇ ಬೇರೆ ರೂಪವಾಗುತ್ತಿತ್ತು.

ಒಟ್ಟಿನಲ್ಲಿ, ಕೇವಲ ಮೂವತ್ತು ವರ್ಷವೆಂದು, ಸತ್ಯವ್ಯವಸ್ಥೆಯ ಸ್ಥಾನ

ಮಾನವನ್ನು ಹೀನೈಸಿ ತೋರುವ ಪ್ರಯತ್ನಗಳೆಲ್ಲವೂ ನಿರರ್ಥಕ ಹಾಗೂ ನಿಷ್ಫಲ. ಸತ್ಯ ಪದ್ಧತಿಯು ಸಂಪೂರ್ಣವಾಗಿಯಲ್ಲದಿದ್ದರೂ ಅರ್ಧಾಂಶ, ಕಾಲಂಶ ಅಥವಾ ಒಂದು ದಿನವಾದರೂ ಸ್ಥಾಪಿಸಲ್ಪಟ್ಟರೆ ಶತಮಾನಗಳ ವರೆಗೆ ಉಳಿಯಬಲ್ಲಂತಹ ಶ್ರೇಷ್ಠ ಸತ್ಫಲಗಳನ್ನು ಅವು ನಿಕ್ಷೇಪಿಸುವುದರಲ್ಲಿ ಸಂದೇಹ ಬೇಡ. ಆ ಉನ್ನತ ಸತ್ಫಲಗಳೊಂದಿಗೆ ಹೋಲಿಸಿದಾಗ, ಸತ್ಯವ್ಯವಸ್ಥೆಯನ್ನು ಒಂದು ದಿನದ ಮಟ್ಟಿಗಾದರೂ ಜಾರಿಗೊಳಿಸಲಿಕ್ಕಾಗಿ ಸಹಸ್ರಾರು ಪ್ರಾಣಗಳನ್ನು ಬಲಿತೆರಬೇಕಾಗಿ ಬಂದರೂ ಆ ಬೆಲೆಯು ಹೆಚ್ಚೆನಿಸಲಾರದು. ಯಾಕೆಂದರೆ ಮಾದರೀ ಯೋಗ್ಯವಾದ ಒಂದು ಜೀವನ ಕ್ರಮವನ್ನು ಸಾಕ್ಷಾತ್ಕರಿಸಿ ತೋರಿಸುವುದೇ ಮಾನವಕುಲದ ಮಟ್ಟಿಗೆ ಒಂದು ಮಹದುಪಕಾರವಾಗಿದೆ. ಆ ಸುಂದರ ಚಿತ್ರವು ಹೆಚ್ಚು ಕಾಲ ಉಳಿಯದಿದ್ದರೂ ಅದರ ಒಂದು ಕ್ಷ-ಕಿರಣವು ಅತ್ಯಧಿಕ ಅನುಗ್ರಹ ದಾಯಕವಾಗಿರಬಹುದು. ಇಂದು ಸಾಹಿತ್ಯದಲ್ಲಿ ಕೇವಲ ಕಾಲ್ಪನಿಕ ಚಿತ್ರ (Utopia)ಗಳನ್ನು ತೋರಿಸಿ ಮಾನವನ ವೈಚಾರಿಕ ಹಾಗೂ ನೈತಿಕ ಪ್ರಗತಿಗಾಗಿ ಕೃತಕ ಪ್ರಚೋದನೆ ನೀಡುವುದನ್ನು ನಾವು ನೋಡುತ್ತೇವೆ. ಹೀಗಿರುತ್ತಾ ಕಾಲ್ಪನಿಕ ಚಿತ್ರಗಳ ಬದಲಾಗಿ ಒಂದು ನೈಜ ಘಟನೆಯೇ ಲೋಕದಲ್ಲಿ ಪ್ರದರ್ಶಿಸಲ್ಪಟ್ಟರೆ ಮಾನವರಿಗೆ ಪ್ರಗತಿಕಾರಕ ಪ್ರಚೋದನೆ ನೀಡಲು ಅದು ಹೆಚ್ಚು ಸಹಕಾರಿ ಯಾಗಲಾರದೇ?

ಸತ್ಯವ್ಯವಸ್ಥೆಯನ್ನು ಹೀನೈಸಲಿಕ್ಕಾಗಿ ಅದು ಕೇವಲ ಮೂವತ್ತು ವರ್ಷ ನಡೆಯಿತೆಂದು ಪ್ರಚಾರ ಮಾಡುವವರು ಪ್ರಸ್ತುತ ವ್ಯವಸ್ಥೆಯ ವೈಶಿಷ್ಟ್ಯ ಹಾಗೂ ಸ್ವಭಾವದ ಕುರಿತು ಎಂದಾದರೂ ಶಾಂತಚಿತ್ತರಾಗಿ ಆಲೋಚಿಸಿದ್ದಾರೆಯೇ? ಆ ವ್ಯವಸ್ಥೆಯು ಅಭಿವ್ಯಕ್ತಗೊಳಿಸಿದ ಸರ್ವತ್ರ ಅಚ್ಚರಿದಾಯಕ ಪವಾಡಗಳ ಅದ್ವಿತೀಯತೆಯನ್ನು ಅವರು ಸ್ವಲ್ಪವಾದರೂ ಆಲೋಚಿಸಿದ್ದಾರೆಯೇ?

ಆ ವ್ಯವಸ್ಥೆ ಹೀಗಿತ್ತು; ಒಂದು ರಕ್ತರಹಿತ ಕ್ರಾಂತಿಯಿಂದ ಅದು ಸ್ಥಾಪಿಸಲ್ಪಟ್ಟಿತು. ಅದಕ್ಕಾಗಿ ಅರೇಬಿಯಾದಲ್ಲಿ ಒಟ್ಟು ಕೆಲವು ಸಾವಿರಕ್ಕಿಂತ ಹೆಚ್ಚು ಪ್ರಾಣ ಹಾನಿಯಾಗಲಿಲ್ಲ.

ಸಿ.ಐ.ಡಿ., ಕಾನೂನಿನ ಒತ್ತಡ, ಬಲಾತ್ಕಾರ, ಬುಡಮೇಲು ಕೃತ್ಯ, ಒಳಸಂಚು ಇತ್ಯಾದಿಗಳಾವುವೂ ಇಲ್ಲದೆಯೇ ಅದು ನಡೆಯಿತು.

ಅಸಂಖ್ಯಾತ ಜನರ ಸಂಪೂರ್ಣ ಜೀವನ ಚಿತ್ರವನ್ನು ಆಮೂಲಾಗ್ರವಾಗಿ ಅದು ಬದಲಾಯಿಸಿ ತೋರಿಸಿತು. ಅದು ಪಾಮರರನ್ನು ಪಂಡಿತರನ್ನಾಗಿ ಸುವುದರೊಂದಿಗೆ ಪಂಡಿತರನ್ನು ನಾಯಕರನ್ನಾಗಿ ಮಾಡಿತು. ದುಷ್ಟರನ್ನು ಸದ್ಗುಣ ಸಂಪನ್ನರನ್ನಾಗಿ ಮಾಡಿತು. ಗಲಭೆಕೋರರನ್ನು ಶಾಂತಿಪ್ರಿಯರನ್ನಾಗಿಯೂ, ಶಾಂತಿಪಾಲಕರನ್ನಾಗಿಯೂ ಮಾಡಿತು. ಅಸಂಘಟಿತರನ್ನು ಸುಸಂಘಟಿತರನ್ನಾಗಿಯೂ ಮಾಡಿತು.

ಅದರ ಆಶ್ರಯದಲ್ಲಿ ಅಪರಾಧಗಳ ಪ್ರಮಾಣವು ಕಡಿಮೆಯಾಯಿತು. ಇಂದು ಸುಧಾರಿಸಿಕೊಂಡ ಯಾವ ಜನತೆಗೂ ಅಪರಾಧ ಕೃತ್ಯಗಳ ಪ್ರಮಾಣವನ್ನು ಅಷ್ಟೊಂದು ತಗ್ಗಿಸಲು ಸಾಧ್ಯವಾಗಿಲ್ಲ.

ಅದರ ಆಡಳಿತಗಾರರ ಜೀವನ ಮಟ್ಟವು ಎಲ್ಲ ವಿಧದಲ್ಲಿಯೂ ಜನಸಾಮಾನ್ಯರ ಜೀವನ ಮಟ್ಟಕ್ಕೆ ತುಲ್ಯವಾಗಿತ್ತು.

ಅದರ ಕಾರ್ಯಕರ್ತರು ಲೌಕಿಕ ಸೌಲಭ್ಯಗಳಿಲ್ಲದೆಯೇ ಅತೀ ಸಣ್ಣ ಅಲ್ಪಸಂಖ್ಯಾತ ಪಕ್ಷವಾಗಿದ್ದರೂ ಬೃಹತ್ ಶಕ್ತಿಗಳ ವಿರೋಧವನ್ನು ದಮನಿಸಿದರು.

ಅದರ ಸೇನೆಯು ರಣಾಂಗಣದಲ್ಲಿಯೂ ಸದ್ಗುಣದ ಮಾದರಿ ತೋರಿಸಿತು. ಅವರು ಶತ್ರುಗಳೊಂದಿಗೂ ಸೌಹಾರ್ದ ತೋರಿದರು.

ಅದು ಪ್ರಜೆಗಳ ಶ್ರೇಯೋಭಿವೃದ್ಧಿಯನ್ನು ಸಾಧಿಸುವ ಕರ್ತವ್ಯವನ್ನು ಸಂಪೂರ್ಣವಾಗಿ ನೆರವೇರಿಸಿತು.

ಆದರೆ ಆದರ್ಶ ಸಿದ್ಧಾಂತಗಳಲ್ಲಿ ಎಂದಿಗೂ ಸಡಿಲು ನೀತಿ ಅನುಸರಿಸಲಿಲ್ಲ.

ಅದು ಸಮಾಜದ ವೈಚಾರಿಕ ಏಕಾತ್ಮತೆಯನ್ನು ಭದ್ರ ಬುನಾದಿಯಲ್ಲಿ ಕಟ್ಟಿ ಬೆಳೆಸಿತು. ಯಾವ ಪಕ್ಷಪಾತ ನೀತಿಯಿಂದಲೂ ಅದನ್ನು ಮುರಿಯಲಾಗಲಿಲ್ಲ. ಅಲ್ಲಿ ಯಾವ ರಾಜಕೀಯ ಭಿನ್ನಾಭಿಪ್ರಾಯಗಳೂ ತಲೆ ಎತ್ತಲಿಲ್ಲ.

ಅದರ ವಿರುದ್ಧ ಸಹಗುಂಪುಗಳಿಂದ ಯಾವ ಪ್ರತಿಕ್ರಾಂತಿಯೂ ಉದ್ಭವಿಸಲಿಲ್ಲ.

ಅದರಲ್ಲಿ ನಿತ್ಯ ಜೀವನವು ಸದ್ಗುಣ ಸಂಪನ್ನವಾಗಿತ್ತು. ದುರ್ಗುಣಗಳು ದುರ್ಲಭವಾಗಿದ್ದುವು.

ಮಾದರೀ ಯೋಗ್ಯವಾದ ಆ ವ್ಯವಸ್ಥೆಗೆ ಸಾಟಿಯಾದ ಬದಲಿ ವ್ಯವಸ್ಥೆಯನ್ನು ಆವಿಷ್ಕರಿಸಲು ಇಸ್ಲಾಮೇತರ ವಿಚಾರವಾದಿಗಳಿಗೆ ಈ ತನಕ ಸಾಧ್ಯವಾಗಿಲ್ಲ. ಈ

ಹಿನ್ನೆಲೆಯಲ್ಲಿ ಅದು ಮೂವತ್ತು ವರ್ಷ ನಡೆದರೂ ಧಾರಾಳವೆಂದೇ ಹೇಳಬಹುದು. ಅದು ಮಾನವಕುಲಕ್ಕೆ ಅನುಕರಣಾರ್ಹ ಜೀವನ ವಿಧಾನವನ್ನು ಸಮರ್ಪಿಸಿತು. ಎಲ್ಲ ವಿಧದಿಂದಲೂ ಅದನ್ನು ಪರೀಕ್ಷಿಸಿ ನೋಡಿದ ಬಳಿಕ, ಅದರ ಮಾದರಿಯನ್ನು ಅನುಕರಿಸಲು ಸಾಕಷ್ಟು ಅವಕಾಶವನ್ನು ಜನರಿಗೆ ನೀಡಿತು. ಭೂತಕಾಲವು ಕಾಲ್ಪನಿಕ ಚಿತ್ರದ ಬದಲಾಗಿ ಒಂದು ವಾಸ್ತವಿಕತೆಯನ್ನು ನಮ್ಮ ಮುಂದಿಟ್ಟಿದೆ. ಆ ಮಾದರಿಯಲ್ಲಿ ಉಜ್ವಲ ಭವಿಷ್ಯವನ್ನು ಕಟ್ಟಲೂ ನಮಗೆ ಸಾಧ್ಯವಿದೆ.

ಇಂತಹ ಒಂದು ವ್ಯವಸ್ಥೆಯು ಇನ್ನೊಮ್ಮೆ ಮೂವತ್ತು ವರ್ಷವಾದರೂ ನವೋದಯಗೊಂಡರೆ ಅದರಿಂದ ಮುಂದಿನ ಜನಾಂಗದ ಮಟ್ಟಿಗೆ ಮಾನವಕುಲದ ಶ್ರೇಯೋಭಿವೃದ್ಧಿಯು ಪುನಃ ನವೀಕರಣ ಹೊಂದುವುದು. ದೀರ್ಘವಾದ ರಾತ್ರಿಯ ಬಳಿಕ ಒಂದು ಸಣ್ಣ ಬೆಳಕು ಕಾಣುವ ಭಾಗ್ಯವು ಲೋಕಕ್ಕೆ ಲಭಿಸಿದರೆ ಸೂರ್ಯೋದಯದ ಸತ್ಫಲಗಳು ಅಸ್ತಮಾನದ ಅನಂತರವೂ ಸ್ಪಷ್ಟವಾಗಿ ಜ್ಞಾಪಕವಾಗುವುದು ಖಚಿತ.

## ನೈಜ ದೃಷ್ಟಿಕೋನ

ಪ್ರಸ್ತಾವಿತ ವಾಸ್ತವಿಕಾಂಶಗಳನ್ನು ಗಮನದಲ್ಲಿಟ್ಟು ಯಾವುದೇ ಸಿದ್ಧಾಂತ ಅಥವಾ ವ್ಯವಸ್ಥೆಯ ಸ್ವೀಕಾರ ಅಥವಾ ನಿರಾಕರಣೆಯಲ್ಲಿ ನಿಷ್ಪಕ್ಷಮತಿಗಳ ವಿಚಾರ ಶೈಲಿ ಹೇಗಿರಬೇಕೆಂದು ಒಮ್ಮೆ ಚೆನ್ನಾಗಿ ಆಲೋಚಿಸಿ ನೋಡಿರಿ.

ಶುಚಿತ್ವದ ನಿಯಮಗಳನ್ನು ನಾನಾ ರೀತಿಯಿಂದ ಪರೀಕ್ಷಿಸಿ ಅದು ಸರಿಯೆಂದು ಮನಗಾಣುತ್ತೀರಿ. ಆದರೆ ನೀವು ದುರ್ಗಂಧಪೂರಿತ ಕೊಳಚೆ ಪ್ರದೇಶದಲ್ಲಿ ವಾಸಿಸುತ್ತಿರುವಿರೆಂದು ಭಾವಿಸೋಣ. ಸಮಾಜದ ಪ್ರತೀಯೋರ್ವನು ಕೊಳಚೆ ಹರಡುವುದರಲ್ಲಿ ನಿರತನಾಗಿದ್ದಾನೆ. ಒಂದು ಹೊಲಸು ವ್ಯವಸ್ಥೆಯೇ ಅಲ್ಲಿ ಜಾರಿಯಲ್ಲಿದೆ. ನೀವು ಆ ಪರಿಸರದ ಚರಿತ್ರೆಯನ್ನು ಪರಿಶೀಲಿಸಬಯಸಿದಿರೆಂದು ಊಹಿಸೋಣ. ಆಗ ನಿಮಗೆ ಇಲ್ಲಿ 50 ವರ್ಷಗಳ ಹಿಂದೆ ಶುಭ್ರತೆ ಹಾಗೂ ಸ್ವಚ್ಛತೆ ಲಾಸ್ಯವಾಡುತ್ತಿದ್ದ ಒಂದು ಸಪ್ತಾಹವು ಜರಗಿತ್ತೆಂದು ತಿಳಿದು ಬರುವುದು. ಅಂದು ವಾಯು ಶುದ್ಧವಾಗಿತ್ತು. ದುರ್ಗಂಧ ಹರಿಯುತ್ತಿರಲಿಲ್ಲ. ರೋಗಾಣು

ಗಳಿರಲಿಲ್ಲ. ಸರ್ವತ್ರ ಸ್ವಚ್ಛತೆ ಮತ್ತು ಶುಭ್ರತೆ ಮೆರೆದಾಡುತ್ತಿತ್ತು. ಆದರೆ ಈ ವಾತಾವರಣವು ಕೆಲವೇ ದಿನ ಉಳಿದು ಕೊನೆಗೊಂಡ ಬಳಿಕ ಆ ದಿನಗಳು ಮರಳಿ ಬರಲಿಲ್ಲ. ತದ್ವಿರುದ್ಧವಾಗಿ ಅಂತಹ ಒಂದು ದಿನ ಬಂದಿರಲೇ ಇಲ್ಲವೆಂದು ಚರಿತ್ರೆಯಿಂದ ನಿಮಗೆ ತಿಳಿಯಿತೆಂದು ಭಾವಿಸೋಣ. ಆ ಸಂದರ್ಭದಲ್ಲಿ ನಿಮ್ಮ ನಿಲುವೇನಿರಬಹುದು?

ಶುಭ್ರತೆಯ ಕಾಲವು ಇತಿಹಾಸದಲ್ಲಿ ಅಪರೂಪವಾಗಿತ್ತು ಅಥವಾ ಅಂತಹ ಕಾಲ ಬಂದಿರಲೇ ಇಲ್ಲ. ಇಂದಿನ ಜನರು ಕೊಳಕು ಇಷ್ಟಪಡುತ್ತಾರೆ ಅಥವಾ ಕೊಳಕು ವ್ಯವಸ್ಥೆಯು ಪ್ರಬಲವಾಗಿದೆ ಎಂಬೀ ಕಾರಣಗಳಿಂದಾಗಿ ನೀವೂ ಮಾಲಿನ್ಯ ಪ್ರೇಮಿಗಳಾಗಿ ನೀಚ ವ್ಯವಸ್ಥೆಯ ನಿಷ್ಕಳಂಕ ಸೇವಕರಾಗಿರಬಯಸುತ್ತೀರಾ? ಖಂಡಿತ ಬಯಸಲಾರಿರಿ. ಆತ್ಮಾಭಿಮಾನವಿದ್ದರೆ ನೀವು ಖಂಡಿತವಾಗಿಯೂ ಹೀಗೆ ಆಲೋಚಿಸುವಿರಿ. ಅದೇನಿದ್ದರೂ ಮಾಲಿನ್ಯ ಮಾನವಕುಲಕ್ಕೆ ಹಾನಿಕರ. ಸ್ವಚ್ಛತೆಯ ಸಿದ್ಧಾಂತ ಮತ್ತು ವ್ಯವಸ್ಥೆಯೇ ಸರಿಯಾದುದು. ಅದು ಉಪಕಾರಿಯೂ ಹೌದು. ಆದ್ದರಿಂದ ಮಲಿನ ವ್ಯವಸ್ಥೆಯ ಉಚ್ಛಾಟನೆಗಾಗಿ ಹೋರಾಡಿ, ಸ್ವಚ್ಛತೆಯ ಸಿದ್ಧಾಂತವನ್ನು ಕಾರ್ಯರೂಪದಲ್ಲಿ ಸ್ಥಾಪಿಸಲಿಕ್ಕಾಗಿ ತೀವ್ರ ಪ್ರಯತ್ನ ನಡೆಸುವುದು ನನ್ನ ಕರ್ತವ್ಯ. ಜೀವಮಾನವಿಡೀ ತ್ಯಾಗ ಮಾಡಿದುದರ ಫಲವಾಗಿ ಒಂದು ದಿನವಾದರೂ ನಿರ್ಮಲ ಸಿದ್ಧಾಂತದಂತೆ ಜೀವಿಸುವ ಸೌಭಾಗ್ಯ ದೊರೆತರೆ, ಈ ಮಲಿನ ವ್ಯವಸ್ಥೆಯ ಆಶ್ರಯದಲ್ಲಿ ನೂರು ವರ್ಷ ಜೀವಿಸುವುದಕ್ಕಿಂತಲೂ ಉತ್ತಮವೆಂದು ಓರ್ವ ಆದರ್ಶವಾದಿಯೆಂಬ ನೆಲೆಯಲ್ಲಿ ನೀವು ನಿರ್ಧರಿಸುವಿರಿ. ಮಾಲಿನ್ಯದ ಹೋರಾಟದಲ್ಲಿ ಸಂಪೂರ್ಣ ಜೀವನ ನಷ್ಟವಾದರೂ ಸ್ವಚ್ಛತೆಯ ಸ್ಥಾಪನೆಯಲ್ಲಿ ಕ್ಷಣ ಮಾತ್ರ ಜಯ ದೊರೆಯದಿದ್ದರೂ ಓರ್ವ ಆದರ್ಶವಾದಿಗೆ ಅದಕ್ಕಿಂತ ಭಿನ್ನವಾದ ಅನ್ಯ ನೀತಿಯನ್ನು ಅಂಗೀಕರಿಸಲು ಸಾಧ್ಯವಿಲ್ಲವೆಂಬ ದೃಢ ನಿಶ್ಚಯದಿಂದ ನೀವು ಕಾರ್ಯರಂಗಕ್ಕೆ ಧುಮುಕುವಿರಿ. ಇಂತಹ ದೃಢ ನಿರ್ಧಾರ ಮತ್ತು ವಿಚಾರ ಶೈಲಿಗಳಿಂದ ಮುನ್ನಡೆಯುವವರೇ ನೈಜ ವಿಜಯಿಗಳು.

ಹಾಗಾದರೆ ಇದೇ ರೀತಿಯಲ್ಲಿ ಇಸ್ಲಾಮಿ ತತ್ವ ಮತ್ತು ಇಸ್ಲಾಮಿ ವ್ಯವಸ್ಥೆಯನ್ನೊಮ್ಮೆ ಪರಿಶೀಲಿಸಿರಿ. ಅದರ ಸತ್ಯಾವಸ್ಥೆಯನ್ನು ಆಲೋಚಿಸಿರಿ. ಅದರ ಸತ್ಫಲಗಳನ್ನು ಜ್ಞಾಪಿಸಿರಿ. ಇದುವೇ ಸತ್ಯ ಮತ್ತು ಸಹಜವಾಗಿದ್ದು

ಮಾನವಕುಲಕ್ಕೆ ಯೋಗ್ಯವಾದ ಏಕೈಕ ತತ್ವವೆಂದು ನಿಮಗೆ ಮನವರಿಕೆಯಾದರೆ ಆ ಬಳಿಕ ನಿಮ್ಮ ಕರ್ಮ ಮಾರ್ಗವು ಒಂದೇ ಆಗಿರಲು ಸಾಧ್ಯ: ಇಸ್ಲಾಮಿನ ಜಾರಿಗಾಗಿ ಸರ್ವ ಶ್ರಮಗಳನ್ನೂ ವ್ಯಯಿಸುವುದು. ನಿಮ್ಮ ಪರಿಶ್ರಮಗಳ ಫಲವಾಗಿ ಇಸ್ಲಾಮ್ ಪುನಃ 30 ವರ್ಷವಾದರೂ ಜಾರಿಗೊಂಡರೆ ಆ ಸ್ವಲ್ಪ ಕಾಲವು ಲೋಕಕ್ಕೆ ಕೊಡುಗೆ ನೀಡುವ ಒಳಿತುಗಳು ಲೋಕವನ್ನು ಸುದೀರ್ಘ ಕಾಲ ಸನ್ಮಾರ್ಗದಲ್ಲಿ ನಡೆಸಲು ಶಕ್ತವಾಗುವುದು.

ನೂರು ವರ್ಷ ಆಡಾಗಿ ಬಾಳುವುದಕ್ಕಿಂತ ಒಂದು ದಿನ ಸಿಂಹವಾಗಿ ಬಾಳುವುದೇ ಲೇಸೆಂಬ ನಾಣ್ಣುಡಿಯನ್ನು "ಮಿಥ್ಯ ವ್ಯವಸ್ಥೆಯ ಆಶ್ರಯದಲ್ಲಿ ಸಾವಿರ ವರ್ಷ ಬಾಳುವುದಕ್ಕಿಂತ ಸತ್ಯ ವ್ಯವಸ್ಥೆಯ ಆಶ್ರಯದಲ್ಲಿ ಒಂದು ದಿನ ಬಾಳುವುದು ಲೇಸೆಂದು" ಬದಲಾಯಿಸಿರಿ. ಅದೂ ಸಾಲದು, ಇನ್ನೂ ಒಂದು ಹೆಜ್ಜೆ ಮುಂದಿಡಿರಿ. "ಇಸ್ಲಾಮೇತರ ವ್ಯವಸ್ಥೆಯಲ್ಲಿ ನೆಮ್ಮದಿಯಿಂದ ವಾಸಿಸುವುದಕ್ಕಿಂತ ಇಸ್ಲಾಮೀ ವ್ಯವಸ್ಥೆಯ ಸಂಸ್ಥಾಪನೆಯ ಹೋರಾಟದಲ್ಲಿ ಹುತಾತ್ಮರಾಗುವುದೇ ಪುಣ್ಯ"ವೆಂಬ ಸಿದ್ಧಾಂತವನ್ನು ನಾವು ಧ್ಯೇಯವಾಗಿ ಅಂಗೀಕರಿಸಬೇಕಾಗಿದೆ.